# ಶ್ರೀಮತಿ ಕೌಜಲಗಿ ನೀಗಮ್ಮ

(ಅಲೆಮಾರಿ ಸಮುದಾಯದ ಕಲಾವಿದೆಯೊ[illegible]ಳ ಅಧ್ಯಯನ)

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಾ[illegible]ಪಡಿಸುತ್ತಿರುವ ಸಂಪ್ರಬಂಧ


ಸಂಶೋಧಕರು

ಡಿ.ಬಿ. ಜ್ಯೋತಿ

ಮಾರ್ಗದರ್ಶಕರು

ಶ್ರೀ ಎ. [illegible] ಪ್ರಭಾ[illegible]

[illegible]ಧ್ಯಾಪಕರು

ಬುಡಕಟ್ಟು [illegible]ಧ್ಯಯನ ವಿಭಾಗ







ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦[illegible]

# ಶ್ರೀಮತಿ ಕೌಜಲಗಿ ನಿಂಗಮ್ಮ

## (ಅಲೆಮಾರಿ ಸಮುದಾಯದ ಕಲಾವಿದೆಯೊಬ್ಬಳ ಅಧ್ಯಯನ)

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಾದರಪಡಿಸುತ್ತಿರುವ ಸಂಪ್ರಬಂಧ


ಸಂಶೋಧಕರು

**ಡಿ.ಬಿ. ಜ್ಯೋತಿ**

ಮಾರ್ಗದರ್ಶಕರು

**ಶ್ರೀ ಎ.ಎಸ್. ಪ್ರಭಾಕರ**

ಅಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ





ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೪

# ದೃಢೀಕರಣ ಪತ್ರ

ಶ್ರೀ ಕುಮಾರಿ ಜ್ಯೋತಿ ಡಿ.ಬಿ. ಇವರು ಶ್ರೀಮತಿ ಕೌಜಲಗಿ ನಿಂಗಮ್ಮ (ಅಲೆಮಾರಿ ಸಮುದಾಯದ ಕಲಾವಿದೆಯೊಬ್ಬಳ ಅಧ್ಯಯನ) ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಈ ಸಂಪ್ರಬಂಧವನ್ನು ಸಲ್ಲಿಸಲಾಗುತ್ತಿದೆ. ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೨೦.೦೪.೦೨
ಸ್ಥಳ : ವಿದ್ಯಾರಣ್ಯ

ಎಂ.ಎಸ್. ಪ್ರಭಾಕರ
ಮಾರ್ಗದರ್ಶಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪ್ರಮಾಣ ಪತ್ರ

ಶ್ರೀಮತಿ ಕೌಜಲಗಿ ನಿಂಗಮ್ಮ (ಅಲೆಮಾರಿ ಸಮುದಾಯದ ಕಲಾವಿದೆಯೊಬ್ಬಳ ಅಧ್ಯಯನ) ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎ.ಎಸ್. ಪ್ರಭಾಕರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಈ ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

D.B. Jyothi

ದಿನಾಂಕ : 30-04-03
ಸ್ಥಳ : ವಿದ್ಯಾರಣ್ಯ

ಜ್ಯೋತಿ ಡಿ.ಬಿ.
ಸಂಶೋಧಕಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

## ಅಧ್ಯಯನದ ಉದ್ದೇಶ

ಶ್ರೇಣೀಕರಣವೆಂಬುವುದು ಇಂಡಿಯಾದ ಸಮಾಜದ ಪ್ರಧಾನ ಲಕ್ಷಣಗಳಲ್ಲಿ ಒಂದು. ಹಲವು ಜಾತಿ ಸಮುದಾಯಗಳು ತಮ್ಮ ವೈವಿಧ್ಯಮಯ ತಿಳುವಳಿಕೆಯ ಮೂಲಕ ಭಾರತವೆಂಬ ಬೃಹತ್ ಸಮಾಜವನ್ನು ರೂಪಿಸಿವೆ. ಜಾತಿ ವ್ಯವಸ್ಥೆಯಲ್ಲಿ ಎಲ್ಲಾ ಬಗೆಯ ಅಧಿಕಾರಗಳನ್ನು ಪಡೆಯಬಲ್ಲ ಉಚ್ಛಜಾತಿಗಳು ಒಂದೆಡೆ ಇದ್ದರೆ, ಯಾವ ಬಗೆಯ ಅಧಿಕಾರಗಳನ್ನು ಪಡೆಯಲು ಅರ್ಹವಲ್ಲದ, ಮುಟ್ಟಿಸಿಕೊಳ್ಳಲು ಯೋಗ್ಯವಲ್ಲದ ಅಸ್ಪೃಶ್ಯ ಸಮುದಾಯಗಳಿರುವ ಅತ್ಯಂತ ವೈರುಧ್ಯಮಯ ಸಮಾಜ ಭಾರತದಲ್ಲಿ ರೂಪಗೊಂಡಿದೆ. ಅಲೆಮಾರಿಗಳು, ಅರೆ ಅಲೆಮಾರಿಗಳು, ಆದಿವಾಸಿಗಳಂತೂ ಭಾರತದ ಸಮಾಜದ ಚಾರಿತ್ರಿಕ ಬೆಳವಣಿಗೆಯಲ್ಲಿ ಸಂಪತ್ತಿನ ಸಮಾನ ಹಂಚಿಕೆಯ ಕುರಿತು ಯಾವತ್ತೂ ದಿಟ್ಟ ಹೋರಾಟ ನಡೆಸಿಯೂ ವಿಫಲವಾಗುತ್ತಲೇ ಇವೆ. ಆದರೆ ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳ ಮೇಲೆ ಸಂಪೂರ್ಣ ಆಧಿಪತ್ಯ ಸ್ಥಾಪಿಸಿದ ಅಧಿಕಾರಸ್ಥ ಸಮುದಾಯಗಳ ಹುನ್ನಾರುಗಳಿಗೆ ಮುಖಾಮುಖಿಯಾಗುತ್ತಾ, ಇಲ್ಲಿನ ದುಡಿಯುವ ವರ್ಗ ಮತ್ತು ಕೆಳಜಾತಿಗಳು ಅನೇಕ ಸಂಘರ್ಷಗಳನ್ನು ಎದುರಿಸುತ್ತ ಕಾಲಕ್ರಮಕ್ಕೆ ಅನುಗುಣವಾಗಿ ತಮ್ಮನ್ನು ರೂಪಿಸಿಕೊಳ್ಳುತ್ತಾ ಬಂದಿವೆ.

ಮನುಷ್ಯ ಕಾಡಲ್ಲಿ ಅನಾಗರಿಕ ಸ್ಥಿತಿಯಿಂದ ತನ್ನನ್ನು ತಾನು ಉತ್ತಮಪಡಿಸಿಕೊಂಡು, ಬೌದ್ಧಿಕವಾಗಿ ತನ್ನ ಜೀವನವನ್ನು ಕಟ್ಟಿಕೊಳ್ಳಲು ತೊಡಗಿದ ಮೇಲೆ, ತನ್ನ ಭಾವನೆಗಳನ್ನು ಯಾವುದಾದರೊಂದು ಮಾಧ್ಯಮದ ಮೂಲಕ ವ್ಯಕ್ತಪಡಿಸಲು ಯತ್ನಿಸಿದ. ಆಂಗಿಕ ಸಂಜ್ಞೆಗಳೇ ಅವನ ಮೊದಲ ಅಭಿವ್ಯಕ್ತಿಯಾಗಿತ್ತು. ತನ್ನ ಮನದ ಚಲನೆಗಳನ್ನು ಇನ್ನೊಬ್ಬರಿಗೆ ದಾಟಿಸಲು ಕೇವಲ ಆಂಗಿಕ ಅಭಿನಯವಷ್ಟೇ ಸಾಲದೆಂದು ಬೇರೆ ಬೇರೆ ಆಯಾಮಗಳಲ್ಲಿ ತನ್ನ ಭಾವನೆಗಳನ್ನು ಮೂಡಿಸಲು ಯತ್ನಿಸಿದ. ಚಿತ್ರಕಲೆ, ಅಭಿನಯ, ಭಾಷೆ ಹೀಗೆ ಒಂದೊಂದೇ ಆಯಾಮಗಳನ್ನು ಮನುಷ್ಯ ಕಂಡುಕೊಳ್ಳುತ್ತಾ ಹೋದ. ಕಾಡಿನ ಬೇಟೆಯಲ್ಲಿ

ಆಕಸ್ಮಾತ್ ಸುಟ್ಟುಹೋದ ಪ್ರಾಣಿಯೊಂದರ ಬೆಂದ ಮಾಂಸವನ್ನು ತಿಂದ ಮೇಲೆ ಬೆಂಕಿಯ ಉಪಯೋಗ, ಆನಂತರ ರಕ್ಷಣೆಗಾಗಿ ಕಟ್ಟಿಕೊಂಡ ಗವಿಯ, ಮರದ ಪೊಟರೆಯ ಅನುಕರಣೆಯಾದ ಪುಟ್ಟ ಗುಡಿಸಲು, ಇವೆಲ್ಲ ಮಾನವ ತನ್ನ ಸೃಜನಶೀಲತೆಯನ್ನು ಹುರಿಗೊಳಿಸಿಕೊಳ್ಳುವ ಹಾದಿಯಲ್ಲಿನ ವಿವಿಧ ಪ್ರಯತ್ನಗಳೇ ಆಗಿವೆ. ಇದೇ ರೀತಿ ನಿಸರ್ಗದ ವೈಚಿತ್ರ್ಯ ಮತ್ತು ನಿಸರ್ಗದಿಂದ ಮಾನವ ತಂದುಕೊಂಡ ಅರಿವು ಸಂಯೋಜನೆಗೊಂಡು ಈ ಜಗತ್ತಿನಲ್ಲಿ ಹಲವು ಸೃಜನಶೀಲ ಸಂಗತಿಗಳು ಘಟಿಸಿಹೋಗಿವೆ.

ಅದರಲ್ಲೂ ಭಾರತದಂತಹ ಹಲವು ಕೌಶಲ್ಯಗಳನ್ನು ರೂಢಿಸಿಕೊಂಡ ವೈವಿಧ್ಯಮಯ ಸಮುದಾಯಗಳು ತಮ್ಮನ್ನು ಭಿನ್ನ ರೀತಿಗಳಲ್ಲಿ ಅಭಿವ್ಯಕ್ತಿಸಿಕೊಳ್ಳುವ ವಿಧಾನಗಳನ್ನು ಕಂಡುಕೊಂಡಿವೆ. ಜೈವಿಕವಾಗಿ ಈ ಸಮುದಾಯಗಳು ಎಷ್ಟು ವೈವಿಧ್ಯವೋ, ತಮ್ಮನ್ನು ತಾವು ವ್ಯಕ್ತಪಡಿಸಿಕೊಳ್ಳುವ ರೀತಿಗಳಲ್ಲೂ ಈ ಸಮುದಾಯಗಳು ವೈವಿಧ್ಯಮಯವಾಗಿವೆ. ಸಮುದಾಯವೊಂದು ತನ್ನ ಸೃಜನಶೀಲತೆಯನ್ನು ಹೀಗೆ ಯಾವುದೋ ಶೂನ್ಯದಲ್ಲಿ ಉದ್ಭವಿಸಿಬಿಡುವ ಅಸಾಧಾರಣ ಸಂಗತಿಯಿಂದ ಹುರಿಗೊಳಿಸಿಕೊಳ್ಳುವುದಿಲ್ಲ. ಲೌಕಿಕದಲ್ಲಿ ತನ್ನ ಅಗತ್ಯಗಳ ಪೂರೈಕೆಗೆ ಮತ್ತು ಇಲ್ಲವಾಗಿ ಬಿಡುವ ಭಯದ ನೆಪದಲ್ಲಿ ತನ್ನನ್ನು ಉಳಿಸಿಕೊಳ್ಳಬೇಕೆಂಬ ಮನುಷ್ಯನ ಸಹಜ ಹಂಬಲಗಳು ಮಾನವನ ಸೃಜನಶೀಲತೆಯನ್ನು ರೂಪಿಸಿವೆ. ಅದು ಲೌಕಿಕದ ಅಗತ್ಯಗಳನ್ನು ಪೂರೈಸುವ, ಇಲ್ಲವೆ ಆ ಅಗತ್ಯಗಳ ಒಂದು ಭಾಗವಾಗಿಯೇ ಮನುಷ್ಯನ ಅಭಿವ್ಯಕ್ತಿ ಕ್ರಮಗಳು ಕಂಡುಕೊಳ್ಳಲ್ಪಟ್ಟಿವೆ. ಇದರ ಜೊತೆಗೆ ಭಿನ್ನ ಭೂಪ್ರದೇಶಗಳು, ವಿಚಿತ್ರ ವಾಯುಗುಣ, ಸಾಮುದಾಯಿಕ ಆಂತರಿಕ ಒತ್ತಡಗಳೂ ಸಹ ಮನುಷ್ಯನಲ್ಲಿ ಅಂತಸ್ಥವಾದ 'ವ್ಯಕ್ತಪಡಿಸುವ' ತಹತಹಗಳನ್ನು ಚೋದಿಸುತ್ತದೆ.

ಇದೇ ಕಾರಣಕ್ಕಾಗಿ ಮಾನವನ ಲೌಕಿಕದ ಪ್ರಯತ್ನಗಳಿಗೆ ಸೋಲುಗಳಿಲ್ಲ. ಹಲವು ಪ್ರಯತ್ನಗಳು ಕೊನೆಗೊಮ್ಮೆ ತಮ್ಮನ್ನು ಪರಿಣಾಮದಲ್ಲಿ ಉತ್ತಮಪಡಿಸಿಕೊಳ್ಳುತ್ತಾ ಪರಿಪೂರ್ಣತೆಯ ಕಡೆಗೆ ಸಾಗಲೆತ್ನಿಸುತ್ತವೆ. ಮನುಷ್ಯ ತಾನು ತಂದುಕೊಂಡ ಅರಿವು ಮತ್ತು ಅವನು ಅದನ್ನು ಬಳಸಲು ಉದ್ದೇಶಿಸಿದ್ದು, ತನ್ನ ಲೌಕಿಕದ ಬದುಕನ್ನು ಕಟ್ಟಿಕೊಳ್ಳಲೆಂದೇ, ಈ ಯತ್ನಗಳ ಆಚೆಗೂ ಮನುಷ್ಯನ ಅಭಿವ್ಯಕ್ತಿಗಳಿಗೆ ಬೇರೆಯ ಕಾರಣಗಳೂ ಇರಬಹುದು. ಬಂಡೆಯ ಮೇಲೆ ಗೀರು ಚಿತ್ರಗಳನ್ನು ಕೊರೆದು ತನ್ನ ಭಾವನೆಗಳನ್ನು ಹೇಳಲು ಹೊರಡುವ ಸರಳ ಅಭಿವ್ಯಕ್ತಿ ವಿಧಾನದಿಂದ ಹಿಡಿದು, ಇಂದಿನ ಅತ್ಯಂತ ಸಂಕೀರ್ಣ ಅಭಿವ್ಯಕ್ತಿ ಕ್ರಮಗಳವರೆಗೆ ಮನುಷ್ಯನು ಅನೇಕ ಸೃಜನಶೀಲ ಯತ್ನಗಳನ್ನು ಹಾದು ಬಂದಿದ್ದಾನೆ. ಅಲ್ಲದೆ ತನ್ನನ್ನು ವ್ಯಕ್ತಪಡಿಸಿಕೊಳ್ಳುವ ವಿಧಾನದಲ್ಲಿ ಹಲವು ಶೋಧಗಳನ್ನು ಕಂಡುಕೊಳ್ಳುತ್ತಲೇ ಬಂದಿದ್ದಾನೆ.

ಇನ್ನು ಭಾರತದಂತಹ ಅಸಮಾನ ಸಾಮಾಜಿಕ ವ್ಯವಸ್ಥೆಯಲ್ಲಿ ಇಲ್ಲಿನ ಸಾಮುದಾಯಗಳು ತಮ್ಮನ್ನು ಅತ್ಯಂತ ರೋಚಕ ರೀತಿಗಳಲ್ಲಿ ವ್ಯಕ್ತಪಡಿಸಿಕೊಳ್ಳಲು ಯತ್ನಿಸಿವೆ. ಭಾರತದಲ್ಲಿ ತಮ್ಮನ್ನು ತಾವು ಹೊರಜಗತ್ತಿಗೆ ತೋರ್ಪಡಿಸಿಕೊಳ್ಳುವುದೇ ಅಪರಾಧವೆಂದು ಪರಿಗಣಿಸುವ ಸಂಪ್ರದಾಯಶೀಲ ಸಮಾಜದಲ್ಲಿ ಇಲ್ಲಿನ ಸಮುದಾಯಗಳು ಸದ್ದಿಲ್ಲದೆ ತಮ್ಮ ಸೃಜನಶೀಲ ವ್ಯಕ್ತಿತ್ವಗಳನ್ನು ರೂಪಿಸಿಕೊಂಡಿವೆ. ಯಾವತ್ತೂ ದುಡಿಯುತ್ತಲೆ, ಸೇವೆ ಮಾಡುತ್ತಲೇ ತಮ್ಮ ಹಕ್ಕುಗಳ ಕುರಿತು ಸದಾ ಮೂಕ ಸ್ಥಿತಿಯಲ್ಲಿಯೇ ಉಳಿದು ಬಿಡುವ, ಓದು, ಬರಹಗಳನ್ನು ಎಂದೆಂದೂ ನಿಷಿದ್ಧವಾಗಿಸಿಕೊಂಡ ದುಡಿವ ವರ್ಗಗಳು ಇಲ್ಲಿ ತಮ್ಮನ್ನು ಅಭಿವ್ಯಕ್ತಿಸಿಕೊಳ್ಳಲು ಕಂಡುಕೊಂಡ ತಾತ್ವಿಕ ನೆಲೆಗಳೇ ಬೇರೆ. ಲೌಕಿಕದ ಬದುಕನ್ನು ಸಂಕೇತಗಳಲ್ಲಿ ವಿವರಿಸಿಕೊಳ್ಳುವುದೇ ದುಡಿವ ವರ್ಗಗಳ ಅಭಿವ್ಯಕ್ತಿಯ ಗುರಿ. ಕಲಾಕೃತಿಯೊಂದನ್ನು ಅಭಿಜಾತಗೊಳಿಸುವ ಪ್ರಕ್ರಿಯೆಯಲ್ಲಿ ತಮ್ಮ ನಿತ್ಯದ ಕಷ್ಟಸುಖಗಳನ್ನು ಸಾಂದ್ರಗೊಳಿಸುವುದೇ ದುಡಿವ ವರ್ಗಗಳ ತತ್‌ಕ್ಷಣದ ಉದ್ದೇಶ. ಇವರಿಗೆ ತಮ್ಮ ಅಭಿವ್ಯಕ್ತಿಗೆ ಶುದ್ಧ ಅಭಿಜಾತತೆಯನ್ನು ಕಲ್ಪಿಸುವ ಉದ್ದೇಶಗಳೇನಿಲ್ಲ.

ತಮ್ಮ ಅಧಿಕಾರರಹಿತ ನಿತ್ಯದ ಬದುಕನ್ನೇ ಪ್ರತಿಮೆಗಳಲ್ಲಿ ಹಿಡಿದಿಡುವ ಲೌಕಿಕದ ಅನಿವಾರ್ಯತೆಗೆ ತಮ್ಮನ್ನು ತಾವು ಒಗ್ಗಿಸಿಕೊಂಡಿದ್ದರಿಂದಲೇ, ಇವರ ಅಭಿವ್ಯಕ್ತಿಗಳಿಗೆ ಒಂದು ಅಪೂರ್ವ ಸಾಂದ್ರತೆಯು ದತ್ತವಾಗಿ ಬಿಟ್ಟಿರುತ್ತದೆ. ತನ್ನ ಈ ಕ್ಷಣದ ಬದುಕಿಗೆ ಪ್ರತಿಕ್ರಿಯಿಸುವ ಒಬ್ಬ ಸಾಮಾನ್ಯನ ಅಭಿವ್ಯಕ್ತಿ ವಿಧಾನಕ್ಕೂ, ಸೃಜನಶೀಲನೊಬ್ಬ ವರ್ತಮಾನಕ್ಕೆ ಸ್ಪಂದಿಸುವ ಕ್ರಮಕ್ಕೂ ರೂಪದಲ್ಲಿ ಮಾತ್ರ ವ್ಯತ್ಯಾಸ ಕಾಣಲು ಸಾಧ್ಯ. ದುಡಿವ ವರ್ಗಗಳ ಅಭಿವ್ಯಕ್ತಿಯು ನಿತ್ಯದ ಬದುಕಲ್ಲಿ ಆಚರಣೆಯಾಗಿ ಆವರ್ತಗೊಳ್ಳುತ್ತಲೇ ಇರುತ್ತದೆ. ಹೀಗಾಗಿ ಭಾರತದ ದುಡಿವ ವರ್ಗಗಳ ಅಭಿವ್ಯಕ್ತಿಯು ಲೌಕಿಕದ ಬದುಕಿನ ಪ್ರತಿಸೃಷ್ಟಿಯಾದರೆ, ಆ ಅಭಿವ್ಯಕ್ತಿಯು ಮತ್ತೆ ಮತ್ತೆ ಆಚರಣೆಯ ರೂಪದಲ್ಲಿ ತನ್ನನ್ನು ಪುನರ್‌ರೂಪಿಸಿಕೊಳ್ಳುತ್ತಲೇ ಇರುತ್ತದೆ. ಈ ಕಾರಣದಿಂದಾಗಿ, ಭಾರತದಲ್ಲಿನ ಅಧಿಕಾರರಹಿತ ಸಮುದಾಯಗಳ ಅಭಿವ್ಯಕ್ತಿಯು ಅವುಗಳ ನಿತ್ಯದ ಬದುಕಿನ ಸಾಂಕೇತಿಕ ದಾಖಲೆಯೇ ಆಗಿರುತ್ತದೆ. ಹೀಗಾಗಿ ದುಡಿವ ವರ್ಗಗಳ ಕಲಾಭಿವ್ಯಕ್ತಿಯನ್ನು ಆ ಸಮುದಾಯದ ಸಮಷ್ಠಿ ತಿಳುವಳಿಕೆಯ ಒಂದು ಭಾಗವಾಗಿಯೇ ನಾವು ನೋಡಬೇಕಿದೆ. ಇಲ್ಲದಿದ್ದಲ್ಲಿ ವ್ಯಾಸ ಭಾರತದ ದುರ್ಯೋಧನನಿಗೂ, ರನ್ನನ ಸುಯೋಧನನಿಗೂ ಇರುವ ವ್ಯತ್ಯಾಸಗಳನ್ನು 'ಶುದ್ಧ ಅಕಾಡೆಮಿಕ್' ನೆಲೆಯಲ್ಲಿ ಕಂಡುಕೊಳ್ಳಲಾಗುವುದಿಲ್ಲ. ಒಂದು ಸಮುದಾಯದ ಅಭಿವ್ಯಕ್ತಿಯನ್ನು ಅದರ ಸಾಮಾಜಿಕ, ಆರ್ಥಿಕ ನೆಲೆಗಳಿಂದಲೇ ನೋಡಬೇಕಾಗುತ್ತದೆ. ರನ್ನನ ದುರ್ಯೋಧನ, ಪಂಪನ ಕರ್ಣರು ಈ ಇಬ್ಬರು ಮಹಾನ್ ಕವಿಗಳ ಸಮುದಾಯದ ರಾಜಕೀಯಾರ್ಥಿಕ ನೆಲೆಗಳಿಂದಲೇ ರೂಪಗೊಂಡರು. 'ಶುದ್ಧ ಶೈಕ್ಷಣಿಕ' ನೆಲೆಯಿಂದಲೇ ಈ ಅಸಮಾನ ಸಮಾಜದ ಅಭಿವ್ಯಕ್ತಿ ಕ್ರಮಗಳನ್ನು ಅರ್ಥಮಾಡಿಕೊಳ್ಳುವುದು ಒಂದು ಸಾಂಸ್ಕೃತಿಕ ಅಪರಾಧವೇ ಸರಿ.

ನನ್ನ ಈ ಅಧ್ಯಯನ, ಅಲೆಮಾರಿ ಸಮುದಾಯವೊಂದರ ಶ್ರೇಷ್ಠ ಕಲಾವಿದೆಯು ರೂಪಗೊಂಡ ಬಗೆಯನ್ನು ವಿವರಿಸಿಕೊಳ್ಳಲು ಯತ್ನಿಸುತ್ತದೆ. ಸದರಿ ಕಲಾವಿದೆಯ ಸಾಮಾಜಿಕ, ಆರ್ಥಿಕ ನೆಲೆಗಳಿಂದಲೇ ಅವಳ ಕಲಾಬದುಕನ್ನು ಅಧ್ಯಯನಕ್ಕೊಳಪಡಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಭಾರತದ ಅಧಿಕಾರರಹಿತ ಸಮುದಾಯಗಳ ಸೃಜನಶೀಲ ಚೈತನ್ಯವನ್ನು ಅವುಗಳ ರಾಜಕೀಯಾರ್ಥಿಕ ನೆಲೆಗಳಿಂದಲೇ ಅರ್ಥಮಾಡಿಕೊಳ್ಳಬೇಕೆಂಬ ತಾತ್ವಿಕತೆಯೊಂದಿಗೆ ಇಲ್ಲಿನ ವಿವರಗಳಿಗೆ ಮುಖಾಮುಖಿಯಾಗಲು ಯತ್ನಿಸಲಾಗಿದೆ. ಏಕೆಂದರೆ ಭಾರತದ ಶೋಷಿತ ಸಮುದಾಯಗಳ ಅಂತಸ್ಥ ಜಗತ್ತು ರೂಪಕಗಳಿಂದ ಕಿಕ್ಕಿರಿದ ಸಂಕೀರ್ಣ ಲೋಕ. ಅಲ್ಲಿ ಶುದ್ಧ ಶೈಕ್ಷಣಿಕ ಮಾನದಂಡಗಳು ತಲೆ ಕೆಳಗಾಗುತ್ತಿವೆ. ಈ ಕಾರಣಕ್ಕಾಗಿ ನಾನು ಅಧ್ಯಯನ ಮಾಡಲು ಹೊರಟಿರುವ ಕಲಾವಿದೆಯನ್ನು ಅವಳ ಸಾಮಾಜಿಕ, ಆರ್ಥಿಕ ಬದುಕಿನ ವಿವರಗಳೊಂದಿಗೆ ಅರ್ಥಮಾಡಿಕೊಳ್ಳಲು ಇಲ್ಲಿ ಯತ್ನಿಸಿದ್ದೇನೆ.

ಪ್ರಸ್ತುತ ನನ್ನ ಅಧ್ಯಯನ ಅಲೆಮಾರಿ ಡೊಂಬರ ಸಮುದಾಯದ ಕಲಾವಿದೆಯಾದ ಶ್ರೀಮತಿ ಕೌಜಲಗಿ ನಿಂಗಮ್ಮನನ್ನು ಕುರಿತದ್ದಾಗಿದೆ. ಡೊಂಬರು ಕಾಲಕ್ರಮಕ್ಕೆ ಅನುಗುಣವಾಗಿ ತಮ್ಮನ್ನು ಅನೇಕ ವೃತ್ತಿಗಳಿಗೆ ಒಪ್ಪಿಸಿಕೊಂಡು ಬಂದಿದ್ದಾರೆ. ಪ್ರದರ್ಶನ ಕಲೆಗಳನ್ನು, ಕರಕುಶಲ ಕಲೆಗಳನ್ನು ನಂಬಿ, ಈ ಎರಡು ರಂಗಗಳಲ್ಲಿ ಅಗಾಧ ಕೌಶಲ್ಯಗಳನ್ನು ಮೈಗೂಡಿಸಿಕೊಂಡಿದ್ದಾರೆ. ಅದರಲ್ಲೂ ದೇವದಾಸಿಯರನ್ನಾಗಿಸಲು ಇದೇ ಸಮುದಾಯದ ಸುಂದರ ಮಹಿಳೆಯನ್ನು ಈ ಶ್ರೇಣೀಕೃತ ಸಮಾಜ ಉಪಯೋಗಿಸುತ್ತಾ ಬಂದಿದೆ. ದೇವಾಲಯದ ಇತರ ಕೆಲಸಗಳ ಜೊತೆ ಸಂಗೀತ, ನೃತ್ಯ, ನಾಟಕ ಮುಂತಾದ ಪ್ರದರ್ಶಕ ಕಲೆಗಳನ್ನು ರೂಢಿಸಿಕೊಳ್ಳುವುದು ಈ ಸಮುದಾಯದ ಮಹಿಳೆಯರಿಗೆ ಅನಿವಾರ್ಯವಾಯಿತು. ರಂಗಭೋಗ, ಅಂಗಭೋಗದಂತಹ ಪರಂಪರೆಗಳು ಈ ಸಮುದಾಯದ ಮಹಿಳೆಯರನ್ನು ನಿರಂತರವಾಗಿ ಶೋಷಣೆಗೆ ಒಳಪಡಿಸುತ್ತಾ ಬಂದಿವೆ.

ಪರಂಪರಾನುಗತವಾಗಿ ಈ ಸಮುದಾಯದ ಮಹಿಳೆಯರು ಜನಪದ ಸಂಗೀತ, ನೃತ್ಯ ಮತ್ತು ಕಲಾ ಪ್ರದರ್ಶನದಲ್ಲಿ ಪರಿಣಿತಿ ಹೊಂದಿದವರಾಗಿದ್ದರು. ಈ ಪರಂಪರೆಯನ್ನೇ ಮೈಗೂಡಿಸಿಕೊಂಡ ಕೌಜಲಗಿ ನಿಂಗಮ್ಮ ರಂಗಭೂಮಿಗೆ ನೀಡಿದ ಕೊಡುಗೆ ಅನನ್ಯವಾದದ್ದು. ಶ್ರೀಕೃಷ್ಣ ಪಾರಿಜಾತದಂತಹ ರಂಗಪ್ರಕಾರವನ್ನು ಜನಪದ ರಂಗಭೂಮಿಗೆ ಕೊಡುಗೆಯಾಗಿ ನೀಡಿದವಳು ನಿಂಗಮ್ಮ. ಕರ್ನಾಟಕದ ರಂಗಭೂಮಿಯನ್ನು ಪ್ರವೇಶಿಸಿದ ಮೊದಲ ಸ್ತ್ರೀ ಎಂಬ ಕೀರ್ತಿಗೆ ಸಹ ನಿಂಗಮ್ಮ ಪಾತ್ರಳಾಗಿದ್ದಾಳೆ. ಕೌಜಲಗಿ ನಿಂಗಮ್ಮ ಜನಪದ ರಂಗಭೂಮಿ ಪ್ರವೇಶಿಸುವುದಕ್ಕೆ ಅವಳ ಸಮುದಾಯ ಹೇಗೆ ಯಾವ ಹಂತದಲ್ಲಿ ಪ್ರೇರೇಪಿಸಿತು. ಯಾವ ಒತ್ತಡಗಳು ನಿಂಗಮ್ಮನನ್ನು ರಂಗಭೂಮಿಗೆ ಎಳೆದು ತಂದವು? ರಂಗಭೂಮಿ ಪ್ರವೇಶದ ಮೊದಲ

ಹಂತದಲ್ಲಿ ಕೌಜಲಗಿ ನಿಂಗಮ್ಮ ಅನುಭವಿಸಿದ ನೋವು ನಲಿವುಗಳಾವುವು? ಎಂಬ ಪ್ರಶ್ನೆಗಳನ್ನು ಇಲ್ಲಿ ಕೇಳಿಕೊಳ್ಳಲಾಗಿದೆ.

ಕೌಜಲಗಿ ನಿಂಗಮ್ಮನಂತಹ ಕಲಾವಿದೆಯನ್ನು ಅವಳ ಸಾಮಾಜಿಕ ಹಿನ್ನೆಲೆಯ ಮೂಲಕ ಅಧ್ಯಯನಕ್ಕೊಳಪಡಿಸುವುದು, ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ. ಯಾವುದೇ ಕಲೆ ಮತ್ತು ಸಂಸ್ಕೃತಿ, ಆಯಾ ಸಮುದಾಯದ ಸಾಮಾಜಿಕ ಮತ್ತು ಆರ್ಥಿಕ ಬದುಕಿನ ಉತ್ಪನ್ನಗಳೆಂದೇ ಇಲ್ಲಿ ಭಾವಿಸಲಾಗಿದೆ. ಈ ಸಮುದಾಯದ ಮಹಿಳೆಯ ಜೀವನ ಹಾಗೂ ಜನಪದ ರಂಗಭೂಮಿಗೆ ಇರುವ ನಿಕಟವಾದ ಸಂಬಂಧವನ್ನು ಗುರುತಿಸುವುದು ಸಹ ಇಲ್ಲಿ ಅತ್ಯಂತ ಮಹತ್ವದ ಸಂಗತಿಯಾಗಿದೆ.

ನಿಂಗಮ್ಮ, ಪಾರಿಜಾತದಂತಹ ಮಹತ್ವದ ರಂಗಪ್ರಕಾರವನ್ನೇ ಉತ್ತರಕರ್ನಾಟದಲ್ಲಿ ಪ್ರಾರಂಭಿಸಿದಳು. ಮಹಿಳೆಗೆ ಎಲ್ಲ ಬಗೆಯ ಸ್ವಾತಂತ್ರ್ಯಗಳನ್ನು ನಿರಾಕರಿಸುವ ಭಾರತೀಯ ಸಮಾಜದಲ್ಲಿ ಹುಟ್ಟಿದ, ಕೆಳಜಾತಿಯ ಈ ಹೆಣ್ಣುಮಗಳು, ಕನ್ನಡ ರಂಗಭೂಮಿಯ ಮೊದಲ ನಟಿಯಾಗಿ ರೂಪುಗೊಂಡಳು. ಒಬ್ಬ ಕಲಾವಿದೆಯಾಗಿ, ಮಹಿಳೆಯಾಗಿ ರಂಗಭೂಮಿಯಂತಹ ದೃಶ್ಯ ಮಾಧ್ಯಮಕ್ಕೆ ತನ್ನನ್ನು ಒಪ್ಪಿಸಿಕೊಳ್ಳುವ ಹಿನ್ನೆಲೆಯಲ್ಲಿ ನಿಂಗಮ್ಮ ಯಾವ ಬಗೆಯ ಸಾಮಾಜಿಕ, ಆರ್ಥಿಕ ಒತ್ತಡಗಳನ್ನು ಅನುಭವಿಸಿರಬಹುದು? ಯಾವ ಬಗೆಯ ಅಧಿಕಾರಗಳೂ ಇರದ ಅಲೆಮಾರಿ ಸಮುದಾಯವೊಂದರಿಂದ ಬಂದ ನಿಂಗಮ್ಮನ ಒಳಗೆ, ಅಗಾಧ ಪ್ರತಿಭೆಯ ಕಲಾವಿದೆಯೊಬ್ಬಳು ರೂಪುಗೊಂಡ ಬಗೆ ಯಾವುದು? ಎಂಬ ಪ್ರಶ್ನೆಗಳು ಇಲ್ಲಿ ಮಹತ್ವದವೆಂದೇ ನಂಬಲಾಗಿದೆ.

ಜನಪದ ರಂಗಭೂಮಿಯಲ್ಲಿ ಇಲ್ಲಿಯವರೆಗೆ ಕೇವಲ ಕೃಷ್ಣಪಾರಿಜಾತ ಮತ್ತು ಕೌಜಲಗಿ ನಿಂಗಮ್ಮ ಇವರ ಕೊಡುಕೊಳ್ಳುವಿಕೆಗಳನ್ನು ಕುರಿತ, ಅಲ್ಪಪ್ರಮಾಣದ ಅಧ್ಯಯನಗಳು ನಡೆದಿವೆ. ಈ ಅಧ್ಯಯನಗಳು, ಅವಳನ್ನು ರೂಪಿಸಿದ ಸಮುದಾಯವನ್ನು ಗಂಭೀರವಾಗಿ ಪರಿಗಣಿಸಿಲ್ಲ. ಕೌಜಲಗಿ ನಿಂಗಮ್ಮನ ಸಮುದಾಯ ಮತ್ತು ಅವಳು ಕರ್ನಾಟಕದ ಜನಪದ ರಂಗಭೂಮಿಗೆ ಸಲ್ಲಿಸಿರುವ ಸೇವೆಯನ್ನು ಈ ಅಧ್ಯಯನ ಗಂಭೀರವಾಗಿ ಪರಿಗಣಿಸುತ್ತದೆ.

ಸಂಪ್ರಬಂಧದ ಅಧ್ಯಾಯಗಳು ಈ ಕೆಳಗಿನಂತಿವೆ

ಅಧ್ಯಾಯ ೧, ಶ್ರೀಮತಿ ಕೌಜಲಗಿ ನಿಂಗಮ್ಮ ಅಲೆಮಾರಿ ಸಮುದಾಯದ ಕಲಾವಿದೆಯೊಬ್ಬಳ ಅಧ್ಯಯನ ಎಂಬ ವಿಷಯದ ಬಗ್ಗೆ ಕೈಗೊಂಡ ಅಧ್ಯಯನದ ಉದ್ದೇಶಗಳು ಮತ್ತು ಅಧ್ಯಯನದ ವ್ಯಾಪ್ತಿಗೆ ಒಳಗೊಂಡ ವಿಷಯವನ್ನು ತಿಳಿಸಲಾಗಿದೆ. ಹಾಗೂ ಈ ಅಧ್ಯಯನಕ್ಕೆ ಒಳಪಡಿಸಿದ ವಿಧಾನಗಳ ವಿವರಣೆಯನ್ನು ನೀಡಲಾಗಿದೆ.

ಅಧ್ಯಾಯ ೨, ಡೊಂಬರ ಸಮುದಾಯದ ಮಹಿಳೆ ಈವರೆಗೆ ಸಮುದಾಯದ ಮೂಲ ಸ್ತ್ರೀಯಾಗಿ ಕಾಣಿಸಿಕೊಂಡ ರತ್ನಾಜಿ, ಚನ್ನಮಾಜಿ, ಇವರ ಚರಿತ್ರೆಯ ಮೂಲಕ ಡೊಂಬರ ಸಮುದಾಯ ಮಹಿಳೆಯನ್ನು ಪರಿಚಯಿಸಲಾಗಿದೆ. ಹಾಗೂ ಈ ಸಮಾಜ ಡೊಂಬರ ಸಮುದಾಯ ಮಹಿಳೆಯರಿಗೆ ಪ್ರಾಚೀನ ಕಾಲದಿಂದ ಇತ್ತೀಚಿನ ದಿನಗಳವರೆಗೆ ನೀಡಿದ ಸ್ಥಾನಮಾನ ಹಾಗೂ ಸಾಮಾಜಿಕ ವ್ಯವಸ್ಥೆಯಲ್ಲಿ ಈ ಸಮುದಾಯ ಮಹಿಳೆಗಳನ್ನು ಬೆಳೆಸಿಕೊಂಡು ಬಂದ ಬಗೆಯನ್ನು ತಿಳಿಸಲಾಗಿದೆ.

ಅಧ್ಯಾಯ ೩, ಡೊಂಬರ ಸಮುದಾಯ ಮತ್ತು ರಂಗಪರಂಪರೆ ಈ ಅಧ್ಯಯನದಲ್ಲಿ ಈ ಸಮುದಾಯ ರಂಗಭೂಮಿಯ ಜೊತೆ ಬೆಳೆದುಕೊಂಡು ಬಂದಿರುವ ವಿಷಯದ ಬಗ್ಗೆ ಚರ್ಚಿಸಲಾಗಿದೆ. ಡೊಂಬರ ಕಲೆಗಳ ಸಂಗೀತ, ನೃತ್ಯ ವಿವಿಧ ಕಸರತ್ತುಗಳನ್ನು ತಮ್ಮ ಮೂಲವೃತ್ತಿಯಾಗಿಕೊಂಡ ಅನಿವಾರ್ಯತೆಯನ್ನು ತಿಳಿಸಲಾಗಿದೆ. ಹಾಗೂ ಈ ಸಮುದಾಯದ ಸಾಂಸ್ಕೃತಿಕ ಆಚರಣೆಗಳು ಎಲ್ಲಮ್ಮ ದೇವರ ಆರಾಧನೆಯಲ್ಲಿ ಕಂಡುಬರುವ ಜೋಗತಿಯರು ಹಾಗೂ ಹನುಮಂತದೇವರ ಓಕುಳಿ ಆಚರಣೆಯಲ್ಲಿ ಡೊಂಬರ ಮಹಿಳೆಯ ರಂಗಸೇವೆ ಹಾಗೂ ಡೊಂಬರ ಹಬ್ಬದಲ್ಲಿ ಡೊಂಬತಿಯರ ಕುಣಿತ ಈ ಎಲ್ಲಾ ಆಚರಣೆಗಳ ಮೂಲಕ ಈ ಸಮುದಾಯದಲ್ಲಿ ರಂಗಪರಂಪರೆ ಬೆಳೆದುಕೊಂಡು ಬಗ್ಗೆ ಹಾಗೂ ಆಚರಣೆ ಹುಟ್ಟುಹಾಕಿದ ಅಧಿಕಾರಸ್ತರ ಹುನ್ನಾರುಗಳನ್ನು ತಿಳಿಸಲಾಗಿದೆ. ಈ ಅಧ್ಯಯನದಿಂದ ಕಂಡುಕೊಂಡ ಈ ಸಮುದಾಯದ ರಂಗಭೂಮಿಯ ಕಲಾವಿದೆಯರಾದ ಶ್ರೀಮತಿ ಸಣ್ಣತಿಪ್ಪಮ್ಮ, ಶ್ರೀಗೌರಮ್ಮ, ಎಂ.ಎಸ್. ಲಕ್ಷ್ಮೀದೇವಿ ಇವರನ್ನು ಪರಿಚಯಿಸಲಾಗಿದೆ. ಹಾಗೂ ಕಲಾವಿದೆಯರ ಬದುಕು ಹಾಗೂ ಇವರಿಗೆ ಇರುವ ಸಮಸ್ಯೆಗಳನ್ನು ಚರ್ಚಿಸಲಾಗಿದೆ.

ಅಧ್ಯಾಯ ೪, ಡೊಂಬರ ಸಮುದಾಯದ ಮಹಿಳೆಯರ ನಿಂಗಮ್ಮ. ಡೊಂಬರ ಸಮುದಾಯದ ಮಹಿಳೆಯರ ನಿಂಗಮ್ಮನವರು ಸು. ೧೮ನೇ ಶತಮಾನದಲ್ಲಿ ಹಿಂದುಳಿದ ಸ್ತ್ರೀಯಾಗಿ ಅಂದಿನ ದಿನಗಳಲ್ಲಿ ರಂಗಭೂಮಿಗೆ ಪ್ರವೇಶ ಮಾಡುವ ಸಂದರ್ಭದಲ್ಲಿ ಅವಳಿಗೆ ಇದ್ದ ಸಾಮಾಜಿಕ ಒತ್ತಡಗಳು ಯಾವುವು ಹಾಗೂ ರಂಗಭೂಮಿಗೆ ಪ್ರವೇಶ ಮಾಡುವಾಗ ಅವಳು ಎದುರಿಸಿದ ಸಮಸ್ಯೆಗಳನ್ನು ವಿವರಣೆಯನ್ನು ನೀಡಲಾಗಿದೆ. ಹಾಗೂ ಕೌಜಲಗಿ ನಿಂಗಮ್ಮಳ ಜೀವನ, ನಿಂಗಮ್ಮ ವಂಶಾವಳಿಯನ್ನು ಪರಿಚಯಿಸಲಾಗಿದೆ. ಮತ್ತು ಸಮುದಾಯದವರ ದೃಷ್ಟಿಕೋನದಲ್ಲಿ ನಿಂಗಮ್ಮನ ಬಗ್ಗೆ ಸೂಕ್ಷ್ಮ ವಿವರಣೆಯನ್ನು ನೀಡಲಾಗಿದೆ.

ಅಧ್ಯಾಯ ೫, ಕೌಜಲಗಿ ನಿಂಗಮ್ಮ ಮತ್ತು ಪಾರಿಜಾತ ಉತ್ತರ ಕರ್ನಾಟಕದಲ್ಲಿ ಜನಪ್ರಿಯವಾದ ಶ್ರೀಕೃಷ್ಣ ಪಾರಿಜಾತ ಹುಟ್ಟು ಮತ್ತು ಬೆಳವಣಿಗೆಯನ್ನು ತಿಳುಸುವಲ್ಲಿ ಅಪರಾಳ ತಮ್ಮಣ್ಣ ಮತ್ತು ಕುಲಗೋಡ ತಿಮ್ಮಣ್ಣ ಕೃತಿಗಳ ವಿವರಣೆಯನ್ನು ನೀಡಲಾಗಿದೆ. ಹಾಗೂ ಈ ಪಾರಿಜಾತದ ಜನಪ್ರೀಯವಾಗಲು

ಕಾರಣಗಳನ್ನು ಸೂಕ್ಷ್ಮವಾಗಿ ತಿಳಿಸಲಾಗಿದೆ. ಪಾರಿಜಾತ ಉನ್ನತ ಶಿಖರಕ್ಕೆ ಏರುವಲ್ಲಿ ಸಿಂಹಪಾಲು ಗಿಟ್ಟಿಸಿಕೊಳ್ಳುವಲ್ಲಿ ಕೌಜಲಗಿ ನಿಂಗಮ್ಮಳ ಪಾತ್ರವನ್ನು ಚರ್ಚಿಸಲಾಗಿದೆ. ನಿಂಗಮ್ಮ ಒಬ್ಬ ಸ್ತ್ರೀ ಕಲಾವಿದೆಯಾಗಿ ರಂಗಭೂಮಿಯಲ್ಲಿ ಸಾಧನೆಯನ್ನು ಒಬ್ಬ ನಟಿಯಾಗಿ ಹಾಗೂ ನಾಟಕ ಕಂಪನಿಯ ಮೂಲಕವಾಗಿ ಕಲೆಯನ್ನು ಮತ್ತು ಕಲಾವಿದರನ್ನು ಚಾರಿತ್ರಿಕ ಇತಿಹಾಸದಲ್ಲಿ ಬೆಳೆದುಕೊಂಡು ಬರುವಲ್ಲಿ ಭದ್ರಬುನಾದಿ ಹಾಕುವಲ್ಲಿ ಅವಳ ಸಾಹಸವನ್ನು ವಿವರಿಸಲಾಗಿದೆ. ನಿಂಗಮ್ಮ ತನ್ನ ಸಮುದಾಯದ ಕ್ಕೆ ಅಪಾರವಾದ ಕೊಡುಗೆಯನ್ನು ನೀಡಿದಿದುರ ಬಗ್ಗೆ ಚರ್ಚಿಸಲಾಗಿದೆ. ಮತ್ತು ಇತ್ತೀಚಿನ ದಿನಗಳಲ್ಲಿ ನಿಂಗಮ್ಮ ಬಿಟ್ಟುಹೋದ ನಾಟಕ ಕಂಪನಿಯ ಸ್ಥಿತಿಯನ್ನು ತಿಳಿಸಲಾಗಿದೆ. ಹಾಗೂ ನಿಂಗಮ್ಮಳ ಬಗ್ಗೆ ವಿದ್ವಾಂಸರಿಗೆ ಅಭಿಪ್ರಾಯವನ್ನು ಸಹ ತಿಳಿಸಲಾಗಿದೆ.

## ಅಧ್ಯಯನ ವ್ಯಾಪ್ತಿ

ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಕೌಜಲಗಿಯಲ್ಲಿ ನಿಂಗಮ್ಮ ಜನಿಸಿದಳು. ಬೆಳಗಾವಿ, ಬಿಜಾಪುರ, ಬಾಗಲಕೋಟೆ, ಧಾರವಾಡ ಜಿಲ್ಲೆಗಳು ಇವಳ ಕಾರ್ಯಕ್ಷೇತ್ರವಾಗಿದೆ. ಈ ನಾಲ್ಕು ಜಿಲ್ಲೆಗಳ ಬೇರೆ ಬೇರೆ ಸ್ಥಳಗಳಲ್ಲಿ ನಿಂಗಮ್ಮನ ಕುರಿತು ಮಾಹಿತಿ ಸಂಗ್ರಹಿಸಲಾಗಿದೆ. ನಿರ್ದಿಷ್ಟ ಪ್ರಶ್ನಾವಳಿಯೊಂದಿಗೆ ಈ ಸ್ಥಳಗಳಲ್ಲಿ ಕ್ಷೇತ್ರಕಾರ್ಯ ಮಾಡಲಾಗಿದೆ. ನಿಂಗಮ್ಮನ ಬಂಧುಗಳನ್ನು, ಸಹ ಕಲಾವಿರದರನ್ನು, ವಿದ್ವಾಂಸರನ್ನು ನಿಂಗಮ್ಮನ ಬದುಕಿನ ವಿವರಗಳನ್ನು ಸಂಗ್ರಹಿಸಲು ಸಂದರ್ಶಿಸಲಾಗಿದೆ.

## ಅಧ್ಯಯನದ ಹಂಬಲಗಳು (ವಿಧಾನ)

೧. ಮಾನವನ ಕಲೆಗಳ ಅಭಿವ್ಯಕ್ತಿಯು ಅವನ ಸಾಮುದಾಯಿಕ ಸಾಮಾಜಿಕ ಮತ್ತು ರಾಜಕೀಯಾರ್ಥಿಕ ನೆಲೆಗಳಿಂದ ಸ್ಫೂರ್ತಿಗೊಂಡಿರುತ್ತದೆ.

೨. ಮಾನವನ ನಿತ್ಯದ ಬದುಕಿನ ಕಷ್ಟಸುಖಗಳಿಂದ ಅತೀತವಾದ ಶೂನ್ಯದಲ್ಲಿ ಅವನ ಅಭಿವ್ಯಕ್ತಿಯ ಆಯಾಮಗಳು ರೂಪಗೊಳ್ಳಲಾರವು.

೩. ವ್ಯಷ್ಟಿ ನೆಲೆಯಲ್ಲಿ ಅಭಿವ್ಯಕ್ತಿಗೊಳ್ಳುವ ಕಲಾಭಿವ್ಯಕ್ತಿಯ ಬೇರುಗಳು ಸಮಷ್ಠಿ ಪ್ರಜ್ಞೆಯ ಆಳದಲ್ಲಿ ಹುದುಗಿರುತ್ತವೆ.

೪. ನಿಂಗಮ್ಮ ಒಬ್ಬ ಕಲಾವಿದೆಯಾಗಿ ರೂಪಗೊಳ್ಳುವುದಕ್ಕೆ ಅವಳ ಸಮುದಾಯದ ಜೈವಿಕ ಮತ್ತು ಸಾಮಾಜಿಕ, ಆರ್ಥಿಕ ಆಶಯಗಳು ಪ್ರಧಾನವಾಗಿ ಪ್ರೇರಣೆ ನೀಡಿವೆ.

೫. ನಿಂಗಮ್ಮನಂತಹ ಕಲಾವಿದರು ಆಯಾ ಸಮುದಾಯಗಳ ಸಾಮಾಜಿಕ, ಆರ್ಥಿಕ ಬದುಕಿನ ಉತ್ಪನ್ನಗಳೇ ಆಗಿದ್ದಾರೆ.

ಈ ಹಿಂದೆ ನಡೆದ ಅಧ್ಯಯನದ ಸಮೀಕ್ಷೆಯ ಪ್ರಕಾರ, ಇದುವರೆಗೆ ನಡೆದ ಅಧ್ಯಯನಗಳು ಕೇವಲ ಕೃಷ್ಣಪಾರಿಜಾತದ ಮೂಲಕ ಕೌಜಲಗಿ ನಿಂಗಮ್ಮನನ್ನು ಗುರುತಿಸಿವೆ. ಕಲಾವಿದೆ ಕೌಜಲಗಿ ನಿಂಗಮ್ಮನನ್ನು ಅವಳ ಸಮುದಾಯದ ಮೂಲಕ ನೋಡುವ ಪ್ರಯತ್ನ ನಡೆದಿಲ್ಲ. ಅವಳ ಸಾಮಾಜಿಕ ಹಿನ್ನೆಲೆಯ ಮೂಲಕ ಅವಳನ್ನು ಇಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ.

ಸದರಿ ಅಧ್ಯಯನ ಈ ತಾತ್ವಿಕ ಚೌಕಟ್ಟಿನಲ್ಲಿ ತನ್ನನ್ನು ಮಂಡಿಸಿಕೊಳ್ಳುತ್ತದೆ. ಈವತ್ತಿನ ಸಂಸ್ಕೃತಿ ಚಿಂತನೆಯಲ್ಲಿ ನನ್ನದು ಪುಟ್ಟ ವಿಭಿನ್ನ ಪ್ರಯತ್ನವೆಂದೇ ನಾನು ಭಾವಿಸುತ್ತೇನೆ. ನನ್ನ ಈ ಪ್ರಯತ್ನ ಮುಂದಿನ ಅಧ್ಯಯನಗಳಿಗೆ ಸಹಕಾರಿಯಾಗಲಿ ಎಂಬುದು ನನ್ನ ಈ ಅಧ್ಯಯನದ ಆಶಯ.

ನಿಂಗಮ್ಮನ ಕಲಾ ಬದುಕನ್ನ, ಅವಳ ಒಟ್ಟು ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಮೂಲಕ ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗುವುದು. ಪಾರಿಜಾತದಂತಹ ರಂಗಪರಂಪರೆ ಮತ್ತು ಅಲೆಮಾರಿ ಡೊಂಬರ ಸಮುದಾಯದ ತಿಳುವಳಿಕೆಯ ಜಗತ್ತಿನ ಮೂಲಕ ನಿಂಗಮ್ಮನನ್ನು ಇಲ್ಲಿ ನೋಡಲಾಗುವುದು. ಡೊಂಬರ ಅಲೆಮಾರಿ ಬದುಕಿನ ಒಂದು ಭಾಗವಾಗಿ ನಿಂಗಮ್ಮನನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸ ಲಾಗುವುದು.

■■

ಅಧ್ಯಾಯ ೨

# ಡೊಂಬರ ಸಮುದಾಯದಲ್ಲಿ ಮಹಿಳೆ

ಭಾರತವು ಹಲವಾರು ಅಲೆಮಾರಿ ಸಮುದಾಯಗಳನ್ನು ಹೊಂದಿರುವ ದೇಶವಾಗಿದೆ. ಅದರಲ್ಲಿ ಡೊಂಬರ ಸಮುದಾಯವು ಒಂದಾಗಿದೆ. ಎಲ್ಲಾ ಬಗೆಯ ಅಧಿಕಾರವನ್ನು ಪಡೆದ ಉಚ್ಚ ಜಾತಿಗಳು ಒಂದೆಡೆ ಇದ್ದರೆ, ಯಾವ ಬಗೆಯ ಸಾಮಾಜಿಕ, ಆರ್ಥಿಕ, ಸ್ಥಾನಮಾನಗಳನ್ನು ಸಮಾಜದಲ್ಲಿ ಪಡೆಯದೇ ಅತ್ಯಂತ ಕೆಳಮಟ್ಟದಲ್ಲಿ ಮುಟ್ಟಿಸಿಕೊಳ್ಳಲು ಸಹ ಯೋಗ್ಯವಲ್ಲದ ಅಸ್ಪೃಶ್ಯ ಸಮುದಾಯಗಳು ಇವೆ. ಇಂತಹ ಸಮುದಾಯಗಳಲ್ಲಿ ಡೊಂಬರ ಸಮುದಾಯವೂ ಒಂದು.

ಡೊಂಬರು ಎಂದ ತಕ್ಷಣವೇ ಕಣ್ಣ ಮುಂದೆ ಬರುವುದು ಡೊಂಬರಾಟ. ಇದು ಇವರ ಮೂಲ ವೃತ್ತಿಯಾಗಿದೆ. ಇವರು ಊರಿನಿಂದ ಊರಿಗೆ ಅಲೆಯುತ್ತಾ, ತಮ್ಮ ಕಲೆಯಾದ ನೃತ್ಯ, ಸಂಗೀತ, ಅಂಗ ಸಾಧನೆ ಹಾಗೂ ವಿವಿಧ ಕಲೆಗಳನ್ನು ಪ್ರದರ್ಶನ ನೀಡುತ್ತಾ ಬಂದವರು. ಪ್ರದರ್ಶನ ಕಲೆಯನ್ನೇ ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡವರು. ಮಾತೃಪ್ರಧಾನ ಸಮುದಾಯವಾಗಿರುವುದರಿಂದ ಈ ಸಮುದಾಯದಲ್ಲಿ ಸ್ತ್ರೀಯರಿಗೆ ಹೆಚ್ಚು ಸಾಮಾಜಿಕ ಸ್ಥಾನಮಾನಗಳು ಲಭಿಸಿವೆ. ಆದರೆ ಭಾರತದ ಶ್ರೇಣೀಕೃತ ವ್ಯವಸ್ಥೆಯಲ್ಲಿ ದುಡಿವ ವರ್ಗಗಳ ಸ್ತ್ರೀಯ ಸಹಜವಾಗಿಯೇ ಅತ್ಯಂತ ಶೋಷಿತ ಸಮುದಾಯಕ್ಕೆ ಸೇರುತ್ತಾಳೆ. ಅದರಲ್ಲೂ ಅಲೆಮಾರಿ ಸಮುದಾಯದ ಮಹಿಳೆ ಈ ಅಸಮಾನ ಸಾಮಾಜಿಕ ವ್ಯವಸ್ಥೆಯಲ್ಲಿ ಅನೇಕ ವಿಕ್ಷಿಪ್ತ ಶೋಷಣೆಗಳಿಗೆ ಈಡಾಗುತ್ತ ಬಂದಿದ್ದಾಳೆ. ಸಂಗೀತ, ನೃತ್ಯಾದಿ ಕಲೆಗಳನ್ನು ರೂಢಿಸಿಕೊಂಡ ಸಮುದಾಯಗಳು ಭಾರತದ ಆಳುವ ವರ್ಗಗಳ ಹೀನ ಅಭಿರುಚಿಗಳಿಗೆ ಬಲಿಯಾಗುತ್ತಲೇ ಬಂದಿವೆ. ಮಾನವನ ಸಾಮಾಜಿಕ ಚರಿತ್ರೆಯಲ್ಲಿ ಹೆಣ್ಣು ಖಾಸಗಿ ಆಸ್ತಿಯೆಂದು ಪರಿಗಣಿತವಾದ ಮೇಲೆ ಅವಳ ಎಲ್ಲ ಬಗೆಯ ಸ್ವಾತಂತ್ರ್ಯಗಳನ್ನು ನಾಶ ಮಾಡಲಾಯಿತು. ಮಾನವನ ಒಟ್ಟು ಉತ್ಪಾದನಾ ವ್ಯವಸ್ಥೆಯಲ್ಲಿ ಪ್ರಧಾನ ಪಾತ್ರ ವಹಿಸುತ್ತಿದ್ದ ಸ್ತ್ರೀ, ಉತ್ಪಾದನಾ ಸಾಧನಗಳ ಮೇಲೆ ತನ್ನ ಹಿಡಿತವನ್ನು ಕಳೆದುಕೊಂಡಾದ ಮೇಲೆ, ಪುರುಷ

ಪ್ರಧಾನ ಸಮಾಜ ಅಸ್ತಿತ್ವಕ್ಕೆ ಬಂದಿತು. ಬೇಟೆ ಮತ್ತು ಪಶುಪಾಲನೆಯ ಹಂತದಲ್ಲಿ ಉತ್ಪಾದನಾ ಕೈಯಲ್ಲಿದ್ದವು. ಮುಕ್ತ ಸಮಾಜದಲ್ಲಿ ಮಾತೃ ಪ್ರಧಾನ ವ್ಯವಸ್ಥೆ ಜಾರಿಯಲ್ಲಿತ್ತು. ಸಾಮುದಾಯಿಕ ಉತ್ಪಾದನೆ ಮತ್ತು ಸಮಾನ ವಿತರಣೆಗಳು ಗಣ ಸಮಾಜವನ್ನು ಸಮಾನತೆಯ ನೆಲೆಯಲ್ಲಿ ರೂಪಿಸಿದ್ದವು. ಸಾಮೂಹಿಕ ಉತ್ಪಾದನೆ ಮತ್ತು ಸಮಾನ ಹಂಚಿಕೆಯ ಆ ಕಾಲಘಟ್ಟದಲ್ಲಿ ಉಳಿತಾಯದ ಪ್ರಶ್ನೆಯೇ ಇರಲಿಲ್ಲ. ಆದರೆ ಉತ್ಪಾದನಾ ಸಾಧನೆಗಳಲ್ಲಿ ಆದ ಅಸಾಧಾರಣ ವಿಕಾಸವು ಮಾನವನ ಸಾಮಾಜಿಕ ಚಲನೆಗಳನ್ನು ಬೇರೆಯೇ ಕಡೆಗೇ ನಿರ್ದೇಶಿಸಿದವು. ಕೃಷಿ ಹಂತದ ನೇಗಿಲಿನ ಉಪಯೋಗವು, ಮಹಿಳೆಯನ್ನು ಉತ್ಪಾದನಾ ವ್ಯವಸ್ಥೆಯಿಂದ ದೂರ ಸರಿಸಿತು. ಅಧಿಕ ಉತ್ಪಾದನೆಯು ಮಿಗುತಾಯಕ್ಕೆ ಕಾರಣವಾಗಿ ಮಾಲಿಕ ಮತ್ತು ಶ್ರಮಿಕ ಎಂಬ ಎರಡು ವರ್ಗಗಳನ್ನು ಹುಟ್ಟುಹಾಕಿತು. ವರ್ಗಸಮಾಜ ಅಸ್ತಿತ್ವಕ್ಕೆ ಬರುತ್ತಿದ್ದಂತೆಯೇ ಮಹಿಳೆ ತನ್ನ ಎಲ್ಲ ಸ್ವಾತಂತ್ರ್ಯಗಳನ್ನು ಕಳೆದುಕೊಂಡಳು. ಖಾಸಗಿ ಆಸ್ತಿಯು ರೂಪಗೊಂಡ ಮೇಲೆ ಉತ್ಪಾದನಾ ಸಾಧನಗಳು, ಸಾಮುದಾಯಿಕ ಒಡೆತನದಿಂದ ಏಕವ್ಯಕ್ತಿಯ ಸ್ವತ್ತಾದವು. ಮುಕ್ತ ಸಮಾಜದ ಸ್ಥಾನದಲ್ಲಿ ಕುಟುಂಬವು ಅಸ್ತಿತ್ವಕ್ಕೆ ಬಂದು ಹೆಣ್ಣು ಖಾಸಗಿ ಆಸ್ತಿಯಾಗಿ ಪರಿಗಣಿತವಾದಳು. ವರ್ಗ ಸಮಾಜ ನಿಯಮಗಳಿಗೊಳಪಟ್ಟ ನಂತರ ಅಸಮಾನ ವ್ಯವಸ್ಥೆಯು ಹಲವು ವಿಧಗಳಲ್ಲಿ ಸಮರ್ಥಿಸಲ್ಪಡಲಾರಂಭಿಸಿತು. ಅಗಾಧ ಸಾಮರ್ಥ್ಯದ ಮಹಿಳೆ ಮತ್ತು ದುಡಿವ ವರ್ಗಗಳಿಗಾಗಿಯೇ ಸಾಮಾಜಿಕ ಕಾನೂನುಗಳು ರೂಪಿಸಲ್ಪಟ್ಟವು. ನೈತಿಕ ಮತ್ತು ಧಾರ್ಮಿಕ ಕಾರಣಗಳೇ ಮುಖ್ಯವಾಗಿ ಮಾನವ ಸಂಬಂಧಗಳು ನಾಶವಾದವು.

"ನಾ ಸ್ತ್ರೀ ಸ್ವಾತಂತ್ರಮರ್ಹತಿ" ಎಂಬ ಮನುಪ್ರಣೀತ ಸಮಾಜ ಮಹಿಳೆಗೆ ಎಲ್ಲ ಬಗೆಯ ಸ್ವಾತಂತ್ರ್ಯಗಳನ್ನು ನಿರಾಕರಿಸಿತು. ಜೊತೆಗೆ ದೇವರು ಮತ್ತು ಧರ್ಮದ ಹೆಸರಲ್ಲಿ ಮಹಿಳೆಯರನ್ನು ಶೋಷಣೆಯ ಅನೇಕ ಆಯಾಮಗಳಿಗೆ ಒಗ್ಗಿಸಲಾಯಿತು. ಭಾರತದ ಸಮಾಜ ಶ್ರೇಣೀಕರಣದ ನಿಯಮಗಳಿಗೆ ಈಡಾಗುವ ವಿವಿಧ ಹಂತಗಳಲ್ಲಿ ಅನೇಕ ರೂಪಾಂತರಗಳನ್ನು ಕಂಡುಕೊಂಡಿತು. ಶ್ರಮ ವಿಭಜನೆಯ ಕಾರಣಕ್ಕೆ ವಿವಿಧ ಕಸಬುಗಳಿಗೆ ಅಂಟಿಕೊಂಡ ಸಮುದಾಯಗಳು ಜಾತಿಗಳಾಗಿ ರೂಪುಗೊಂಡವು. ದುಡಿವ ವರ್ಗಗಳಿಗೆ ಸಾಮಾಜಿಕ, ರಾಜಕೀಯಾರ್ಥಿಕ ಅಧಿಕಾರಗಳನ್ನು ನಿರಾಕರಿಸಲಾಯ್ತು. ಮಹಿಳೆಯು ಯಾವಾಗಲೋ ತನ್ನ ಸ್ವಾತಂತ್ರ್ಯಗಳನ್ನು ಕಳೆದುಕೊಂಡಿದ್ದಳು. ಇನ್ನು ದುಡಿವ ವರ್ಗದ ಮಹಿಳೆಯರನ್ನು, ಈ ಸಮಾಜವನ್ನು ಆಳುವ ಯಜಮಾನ ವರ್ಗಗಳು ತಮಗೆ ಬೇಕಾದ ರೀತಿಯಲ್ಲಿ ಬಳಸಿಕೊಳ್ಳಲೆಂದೇ ವಿಚಿತ್ರವಾದ ರೂಢಿ ಸಂಪ್ರದಾಯಗಳನ್ನು ಜಾರಿಗೆ ತಂದು, ಅವಕ್ಕೆ ದೇವರು, ಧರ್ಮ ಮತ್ತು ಕರ್ಮ ಸಿದ್ಧಾಂತದ ನೆಪಗಳನ್ನು ಗಂಟುಹಾಕಿದರು. ಒಟ್ಟಿನಲ್ಲಿ ಕೆಳಜಾತಿಯ ಮಹಿಳೆಯು ಒಂದು ಬಳಸುವ ವಸ್ತುವಾಗಿ ಪರಿಗಣಿತವಾಗಿ ಹಲವು ಆಯಾಮಗಳಲ್ಲಿ ಶೋಷಣೆಗೊಳಪಟ್ಟಳು.

ರಾಜಶಾಹಿ ಕಾಲಘಟ್ಟದ ಅಂಗಭೋಗ, ರಂಗಭೋಗದಂತಹ ಪದ್ಧತಿಗಳು, ದೇವದಾಸಿಯರು, ಆಸ್ಥಾನ ನರ್ತಕಿಯರು, ದಾಸಿಯರು, ವೇಶ್ಯೆಯರು ಹೀಗೆ ಹಲವು ಸಂಪ್ರದಾಯಗಳಲ್ಲಿ ಕೆಳಜಾತಿಯ ಹೆಣ್ಣುಗಳು ಈ ಸಮಾಜದ ವಿಕೃತ ಚಲನೆಗಳಿಗೆ ಬಲಿಯಾಗಬೇಕಾಯಿತು. ಮೇಲಿನ ವಿವಿಧ ಸಂಪ್ರದಾಯಗಳು ಹಲವು ರೂಪಾಂತರಗಳಿಗೆ ಒಳಗಾಗಿ ಈವತ್ತು ತೆರೆಮರೆಯಲ್ಲಿ ಅಸ್ತಿತ್ವದಲ್ಲಿವೆ. ಯಾವ ಸಮುದಾಯಗಳಿಗೆ ಸಮಾಜದಲ್ಲಿ ರಾಜಕೀಯಾರ್ಥಿಕ ಸ್ಥಾನಮಾನಗಳಿರುವುದಿಲ್ಲವೋ ಅವುಗಳನ್ನು ಧರ್ಮ ಮತ್ತು ಕರ್ಮ ಸಿದ್ಧಾಂತದ ನೆಪಗಳ ಮೂಲಕ ಬಲಿ ಹಾಕಲಾಯ್ತು. ವೇಳೆವಾಳಿ, ವೆಂಕವಾಳಿ, ಗರಡು ಪದ್ಧತಿಯಂತಹ ಸೇವೆಗಳಲ್ಲಿ ಕೆಳಜಾತಿಯ ವೀರರು ಅನಾಮತ್ತು ತಮ್ಮನ್ನು ತಾವು ಬಲಿಕೊಟ್ಟುಕೊಳ್ಳುತ್ತಿದ್ದರು.

ಇಂತಹ ಸಮಾಜದಲ್ಲಿ ಪ್ರದರ್ಶನ ಕಲೆಯನ್ನು ನಂಬಿ ಬದುಕುತ್ತಿದ್ದ ಸಮುದಾಯಗಳಂತೂ ಆಳುವ ವರ್ಗದ ಎಲ್ಲ ಪಿಪಾಸೆಗಳಿಗೆ ಈಡಾಗುತ್ತಿದ್ದವು. ಕಾರಣ ಸಮಾಜದ ಒಟ್ಟು ಉತ್ಪನ್ನದ ಮೇಲೆ ಖಾಸಗಿ ಒಡೆತನ ಅಧಿಕಾರ ಸ್ಥಾಪಿಸಿದ ಮೇಲೆ ಸಂಪತ್ತಿನ ಸಮಾನ ಹಂಚಿಕೆ ಇಲ್ಲವಾಗಿ, ಅಸಮಾನ ಸಮಾಜವು ರೂಪಗೊಂಡಿತು.

ಭಾರತದ ಸಮಾಜ ತನ್ನ ಚಾರಿತ್ರಿಕ ಬೆಳವಣಿಗೆಯಲ್ಲಿ ಸಂಪತ್ತಿನ ಸಮಾನ ಹಂಚಿಕೆಯ ಕುರಿತು ಯಾವತ್ತೂ ದಿಟ್ಟ ಹೋರಾಟ ನಡೆಸಿಯೂ ವಿಫಲವಾಗುತ್ತಾ ಇದೆ. ಭಾರತದ ಪ್ರಧಾನ ಆರ್ಥಿಕ ಮೂಲ ಕೃಷಿ ಉತ್ಪನ್ನವಾಗಿದೆ. ಮೇಲ್ವರ್ಗಗಳ ಕೈಯಲ್ಲಿ ಭೂ ಒಡೆತನವಿದ್ದು, ಕೆಳಜಾತಿಗಳು ಸಹಜವಾಗಿ ಅವರು ಗುಲಾಮರಾದರು. ಹಾಗಾಗಿ ಇವರಿಗೆ ಒಡೆತನದ ಹಕ್ಕೇ ಇಲ್ಲದಂತಾಯ್ತು. ಅದರಲ್ಲಿ ಅಲೆಮಾರಿಗಳಾದ ಡೊಂಬರು ಅನಿವಾರ್ಯವಾಗಿ ತಾವು ರೂಢಿಸಿಕೊಂಡುಬಂದ ನೃತ್ಯ, ಸಂಗೀತ ಕಲೆ ಪ್ರದರ್ಶನವನ್ನು ತಮ್ಮ ವೃತ್ತಿಯಾಗಿಸಿಕೊಂಡರು.

ಸಮಾಜದಲ್ಲಿ ಡೊಂಬರ ಸಮುದಾಯದ ಸ್ತ್ರೀಯರ ಬದುಕಿಗೂ ಹಾಗೂ ಇತರ ಸಮುದಾಯದ ಮಹಿಳೆಯರ ಜೀವನಕ್ಕೂ ಹಲವು ಭಿನ್ನತೆಗಳು ಕಂಡುಬರುತ್ತವೆ. ಸಂಗೀತ, ನೃತ್ಯ ಮತ್ತು ವಿವಿಧ ಕಲಾಪ್ರದರ್ಶನಗಳಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದ ಈ ಸಮುದಾಯದ ಮಹಿಳೆ ಧಾರ್ಮಿಕ ನೆಲೆಯಲ್ಲಿ ಮೇಲುವರ್ಗದವರ ತುಳಿತಕ್ಕೆ ಒಳಗಾಗಿ ವೇಶ್ಯಾ ವೃತ್ತಿಗಿಳಿದಿರಬಹುದು. ಇಂದು ಈ ಪರಂಪರೆ ಕಡಿಮೆಯಾಗಿದೆ. ಪ್ರತಿಯೊಂದು ಹಂತದಲ್ಲಿ ಈ ಸಮುದಾಯದ ಸ್ತ್ರೀ ಅನೇಕ ಸಮಸ್ಯೆಗಳನ್ನು ಧೈರ್ಯದಿಂದ ಎದುರಿಸಲಾರಂಭಿಸಿದ್ದಾಳೆ. ಈ ಅಧ್ಯಾಯದಲ್ಲಿ ಡೊಂಬರ ಸಮುದಾಯದ ಮಹಿಳೆಯನ್ನು ಚಾರಿತ್ರಿಕವಾಗಿ ಚರ್ಚಿಸಲು ಯತ್ನಿಸಿದ್ದೇನೆ.

ಡೊಂಬರ ಸಮುದಾಯ ಬೆಳೆದು ಬಂದ ಬಗೆ

ಡೊಂಬರು ಮೂಲತಃ ಕರ್ನಾಟಕಕ್ಕೆ ಆಂಧ್ರಪ್ರದೇಶದಿಂದ ಬಂದವರು. ಅವರ ಭಾಷೆ, ಹೆಸರುಗಳು, ಸಾಂಸ್ಕೃತಿಕ ಆಚರಣೆಗಳು ಆಂಧ್ರಪ್ರದೇಶದ ಗಡಿಭಾಗದ ಆಚರಣೆಗಳನ್ನೇ ಹೋಲುತ್ತವೆ. "ಕರ್ನಾಟಕದವರಲ್ಲಿ ಇವರು ತೆಲುಗು ಜನಾಂಗಕ್ಕೆ ಸೇರಿದವರಿರಬೇಕು. ಯಾವುದೋ ಒಂದು ಕಾಲಕ್ಕೆ ಕರ್ನಾಟಕಕ್ಕೆ ವಲಸೆ ಬಂದವರು. ಈಗ ಇವರ ತಾಯ್ನಾಡು ಕನ್ನಡ. ಇವರ ತಮ್ಮ ಅಂಗಸಾಧನೆಯನ್ನು ನೃತ್ಯ, ಸಂಗೀತವನ್ನು ಕರ್ನಾಟಕದ ಆಳರಸರಲ್ಲಿ ಪ್ರದರ್ಶಿಸಲು ಬರುತ್ತಿದ್ದರೆಂದು ತೋರುತ್ತದೆ."[೧]

ಕೆಲವರು ಮಹಾರಾಷ್ಟ್ರ ಮತ್ತು ಅನೇಕ ರಾಜ್ಯಗಳಿಂದ ಬಂದಿರಬಹುದು. ನಿರ್ದಿಷ್ಟವಾಗಿ ಮೂಲತಃ ಎಲ್ಲಿಯವರು ಎಂಬ ದಾಖಲೆಗಳು ಕಂಡುಬರುವುದಿಲ್ಲ. ಅಲೆಮಾರಿಗಳಾದ ಇವರು ತಮ್ಮ ಮೂಲವೃತ್ತಿಯಾದ ಬೀದಿಗಳಲ್ಲಿ ತಮ್ಮ ಕಲೆಯನ್ನು ಪ್ರದರ್ಶನ ನೀಡುತ್ತಾ ಊರಿನಿಂದ ಊರಿಗೆ ಹಾಗೆ ರಾಜ್ಯದಿಂದ ರಾಜ್ಯಕ್ಕೆ ಅಲೆಯುತ್ತ ಬಂದವರು. ಇವರ ಮೂಲ ನೆಲೆಯ ಮತ್ತು ಡೊಂಬರ ಹುಟ್ಟಿನ ಬಗ್ಗೆ ಅನೇಕ ಐತಿಹ್ಯಗಳು ಕಂಡುಬರುತ್ತವೆ.

೧. ಒಬ್ಬ ರೆಡ್ಡಿಗೆ ಇಬ್ಬರು ಪತ್ನಿಯರು, ಚಿಕ್ಕವಳಿಗೆ ಅಂಗವಿಕಲ ಮಗು ಜನಿಸಿತು. ಬ್ರಾಹ್ಮಣರ ಬಳಿ ಮಗುವಿನ ಭವಿಷ್ಯ ಕೇಳಿದರು. ಅದಕ್ಕೆ ಬ್ರಾಹ್ಮಣರು ಈ ಅಂಗಹೀನ ಮಗು ನಿಮ್ಮ ಮನೆತನಕ್ಕೆ ಕುಳಂಕ ತರುತ್ತದೆ ಎಂದು ಹೇಳಿದರು. ಈ ಮಾತನ್ನು ಕೇಳಿದ ರೆಡ್ಡಿ ತನ್ನ ಹೆಂಡತಿಗೆ ಮಗುವನ್ನು ಮನೆಯಿಂದ ಹೊರಹಾಕುವುದಕ್ಕೆ ಹೇಳಿದನು. ಆದರೆ ತಾಯಿಯ ಪ್ರೀತಿ ತಡೆಯಿತು. ಅವಳು ಯೋಚಿಸಿ ಇದರಿಂದ ಪರಾಗಾಲು ಒಬ್ಬ ಭಿಕ್ಷುಕನಿಗೆ ತನ್ನ ಮಗುವನ್ನು ಕೊಟ್ಟಳು. ಆ ಭಿಕ್ಷುಕ ಮಗುವಿನ ಭವಿಷ್ಯ ತಿಳಿದಾತಕ್ಷಣ ಮಗುವನ್ನು ಬಾವಿಗೆ ಹಾಕಿದನು. ಆದರೆ ಮಗು ಸಾಯಲಿಲ್ಲ. ಮಗು ಜೋರಾಗಿ ಅಳತೊಡಗಿತು. ಆ ವೇದನೆಯನ್ನು ಕೇಳಿ ಕೈಲಾಸದಿಂದ ಶಿವಪಾರ್ವತಿಯರು ಬಂದು, ಆ ಅಂಗವಿಕಲ ಮಗುವಿಗೆ ಅಂಗಾಂಗ ಚಿಗಿಯುವಂತೆ ಮಾಡಿದರು. ಆ ಮಗು ಬಾವಿಯ ಕೆಳಭಾಗದಿಂದಲೇ ಮಿಂಚಿನಂತೆ. ನೆಗೆದು ಶಿವಪಾರ್ವತಿಯರ ಪಾದಕ್ಕೆ ನಮಸ್ಕರಿಸಿದನಂತೆ "ನೆಗೆಯುತ್ತಾ ಬದುಕು" ಎಂದು ಆಶೀರ್ವದಿಸಿ ಅವರು ಮರುಕ್ಷಣದಲ್ಲಿ ಮಾಯವಾದರು. ಈ ಮಗುವನ್ನು ಕಸರತ್ತುಗಾರ ಗುಂಪಿಗೆ ಸೇರಿಸಿಕೊಂಡರು. ನಂತರ ಆತ ಗುಂಪಿನ ಹುಡುಗಿಯ ಜೊತೆ ಮದುವೆಯಾದನು. ಅವನ ಸಂತಾನವೇ ಡೊಂಬರು."[೨]

೨. "ಒಬ್ಬ ರೆಡ್ಡಿಗೆ ಇಬ್ಬರು ಪತ್ನಿಯರು. ಹಿರಿಯ ಹೆಂಡತಿಯರ ಮೇಲೆ ತುಂಬ ಪ್ರೀತಿ. ಇವಳೇ ಹೊಲದಲ್ಲಿದ್ದ ರೆಡ್ಡಿಗೆ ಊಟ ಕೊಟ್ಟು ಬರಬೇಕು. ಒಂದು ಸಲ ಕಿರಿಯ ಹೆಂಡತಿ ಊಟವನ್ನು ಕೊಡಲು ಹೊಲಕ್ಕೆ ಬರುತ್ತಾಳೆ. ಹೊಲದಲ್ಲಿಯೇ ಹೆಣ್ಣು ಮಗುವನ್ನು ಹೆತ್ತಳು. ಅಲ್ಲಿಯೇ ಗುಡಿಸಲು ಹಾಕಿ

ತಾಯಿ ಮಗುವನ್ನು ನೋಡಿಕೊಳ್ಳಲಾಯಿತು. ಕೆಲವು ದಿನಗಳು ಕಳೆದ ನಂತರ ಮನೆಗೆ ಬರುತ್ತಾಳೆ. ಹಿರಿಯ ಹೆಂಡತಿ, ಸವತಿ ಮತ್ಸರದಿಂದೇ ತಾಯಿ ಮಗುವನ್ನು ಮನೆ ಸೇರಿಸಲು ಒಪ್ಪಲಿಲ್ಲ. ರೆಡ್ಡಿ ಕಿರಿಯ ಹೆಂಡತಿಯನ್ನು ಬೇರೆ ಮನೆಯಲ್ಲಿ ಇಡುತ್ತಾನೆ. ಒಂದಿಷ್ಟು ಭೂಮಿ, ಕೊಳಗ, ಹಗ್ಗ, ಡಂಬು ಇತ್ಯಾದಿಗಳನ್ನು ಕೊಟ್ಟುಬಿಡುತ್ತಾನೆ. ಅಸಹಾಯಕಳಾದ ಈ ತಾಯಿ ಅಷ್ಟರಲ್ಲಿ ಜೀವನ ನಡೆಸುವುದು ಕಷ್ಟವಾಗುತ್ತದೆ. ಕಸರತ್ತು ಮಾಡುವ ಗುಂಪಿನ ಜೊತೆ ಸೇರಿಕೊಳ್ಳುತ್ತಾಳೆ. ಮಗು ತಾಯಿ ಇಬ್ಬರು ಡೊಂಬರ ವಿದ್ಯೆ ಕಲಿಯುತ್ತಾರೆ. ಹುಡುಗಿ ತುಂಬ ಸುಂದರಿಯಾಗಿದ್ದಳು. ಬೀದಿಯಲ್ಲಿ ಕುಣಿದು ಹಾಡಿದ ಇವಳನ್ನು ಜನ ಚೆನ್ನಿ ಚನ್ನಿ ಎಂದು ಕರೆದರಂತೆ. ಕರೆದ ಕಡೆಗಳಲ್ಲಿ ಹೋದ ಚಿನ್ನಿ ಚೆನ್ನಿಸಾನಿ ಆದಳಂತೆ ಮುಂದೆ ಇವಳನ್ನು ಒಬ್ಬ ಜೋಗಿ ಮೋಹಿಸಿ ಬೆಂಬತ್ತಿ ಇತ್ಯಾದಿ."[೩]

ಈ ಐತಿಹ್ಯಗಳು ಡೊಂಬರು ಸಮುದಾಯದ ಹುಟ್ಟಿನ ಮೂಲವನ್ನು ಹೇಳುತ್ತವೆ. ದಂತ ಕತೆಗಳು ತಲೆಮಾರಿನಿಂದ ತಲೆಮಾರಿಗೆ ಬರುವಾಗ ಅನೇಕ ಕಲ್ಪನೆಗಳು ವಾಸ್ತವಾಂಶಗಳು ಜೊತೆಯಲ್ಲಿ ಹುಟ್ಟಿಕೊಂಡ ಕಥೆಗಳಾಗಿವೆ. ಕಥೆಗಳಲ್ಲಿ ಸಹ ಸತ್ಯ ಇರುವುದು ಕಂಡುಬರುತ್ತದೆ. ಆಯಾ ಸಮುದಾಯ ತನ್ನ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಒಂದು ಭಾಗವಾಗಿ ಈ ಕಥೆಗಳನ್ನು ಕಟ್ಟಿಕೊಂಡಿರುತ್ತವೆ.

### ಡೊಂಬ ಪದದ ಅರ್ಥ

ಡೊಂಬ ಎಂಬ ಪದಕ್ಕೆ ಪರ್ಯಾಯವಾಗಿ ಅನೇಕ ಪದಗಳ ಬಳಕೆಯಲ್ಲಿವೆ. "ದೊಂಬ, ಡೊಂಬ, ಡಂಬರ, ಡೋಮ, ಡುಮ್ಮರ, ಡುಮ್ಮರ, ಡೊಮ್ಮರ, ಕೊಲ್ಲಟಗ, ದೋಮ" ಎಂಬ ಮುಂತಾದ ಕನ್ನಡ ನಿಘಂಟುಕಾರರು ಡೊಂಬ, ಮೊಂಬ, ಡೊಮ್ಮರ ಎಂದು ಮೂರು ಪದಗಳನ್ನು ಸೂಚಿಸಿ "ಗಳೆಯ ಮೇಲೆ ಲಾಗ ಹಾಕಿ ಕಸರತ್ತುಗಳನ್ನು ತೋರಿಸುತ್ತಾ ಜೀವನವನ್ನು ನಡೆಸುವವನು" ಎಂದು ಅರ್ಥ ವಿವರಣೆ ನೀಡಿ, ಕೊಲ್ಲಟಿಗ ಪದವನ್ನು ಹೇಳಿದ್ದಾರೆ. ಶಬ್ದಮಣಿ ದರ್ಪಣದಲ್ಲಿ ಕೊಲ್ಲಟಿಗ ನೆನ ಡೊಂಬರು ಎಂದು ವಿವರಿಸಲಾಗಿದೆ. ತೆಲುಗಿನ ಸೂರ್ಯಾಂದ್ರ ನಿಘಂಟು, ತಮಿಳು, ಮಲೆಯಾಳ ಮತ್ತು ತುಳು ಭಾಷೆಗಳಲ್ಲಿರುವ ದೊಮ್ಮರ ತೋಮ್ಬು, ಡೋಮರ, ಡೊಂಬೆ, ದೋಮ್ಬರ್, ಡೊಂಬೆ 'ಕೋಲುಕಟ್ಟಾಡ್ಯೆ' ಡೊಂಬರ ಮುಂತಾದ ಪದಗಳಿಗೆ ಕನ್ನಡದಲ್ಲಿರುವ ಡೊಂಬ (ಜನಾಂಗ) ಎನ್ನುವ ಅರ್ಥವೇ ಇದೆ."[೪]

ಪ್ರಾಚೀನ ಕಾಲದಿಂದ ಅಲೆಮಾರಿಗಳಾದ ಡೊಂಬರು ನಾಗರಿಕತೆಯ ಪ್ರಾರಂಭ ಕಾಲದಲ್ಲಿ ಸಹ ಯಾವುದೇ ಒಂದು ನಿರ್ದಿಷ್ಟ ಪ್ರದೇಶಗಳಲ್ಲಿ ನೆಲೆನಿಲ್ಲದೆ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ

ಅಲೆಯುತ್ತಾ ಮನಮೋಹಕ ನೃತ್ಯ, ಹಾಡು, ಇಂದ್ರಜಾಲ, ಮಾಟಗಾರಿಕೆ ವಿವಿಧ ಕಸರತ್ತುಗಳನ್ನು ಪ್ರದರ್ಶಿಸುತ್ತಾ ಬಂದವರು. ತಮ್ಮ ಪ್ರದರ್ಶನ ಕಲೆಯನ್ನೇ ವೃತ್ತಿಯಾಗಿಸಿಕೊಂಡು ಪ್ರದರ್ಶನದಿಂದ ಬಂದ ಹಣ, ದವಸಧಾನ್ಯ ಪಡೆದುಕೊಂಡು ತಮ್ಮ ಜೀವನವನ್ನು ಸಾಗಿಸುತ್ತಾ ಬಂದವರು. ಇವರು ಯಾರು, ತಮ್ಮ ಕಲೆಯನ್ನು ಪ್ರದರ್ಶನ ನೀಡಿ ತಮಗೆ ಕೀರ್ತಿ ಗೌರವ ಪಡೆದುಕೊಳ್ಳುವುದಕ್ಕೆ ಕಲೆಯನ್ನು ನಂಬಿದವರಲ್ಲ ತಮ್ಮ ಹೊಟ್ಟೆ ಪಾಡಿಗೋಸ್ಕರ ಕಲೆಯನ್ನು ಆಶ್ರಯಿಸಿ ಬದುಕಿದವರು.

## ಆ. ಡೊಂಬರ ಸಮಾಜದ ಚಾರಿತ್ರಿಕ ಬೆಳವಣಿಗೆ

ಸಾಮಾಜಿಕ ಮತ್ತು ಆರ್ಥಿಕ ಅಧಿಕಾರಗಳನ್ನು ಕಳೆದುಕೊಂಡ ಸಮುದಾಯಗಳು ಭಾರತದ ಶ್ರೇಣೀಕೃತ ಸಮಾಜದಲ್ಲಿ ಹಲವು ಸ್ಥಿತ್ಯಂತರಗಳ ಮೂಲಕ ಹಾದುಬಂದಿವೆ. ನಿಶ್ಚಿತ ಆರ್ಥಿಕ ಮೂಲವಿಲ್ಲದೆ, ಆಳುವ ವರ್ಗದ ಮರ್ಜಿಯಲ್ಲಿಯೇ ಬದುಕುವ ಅನಿವಾರ್ಯತೆ ಸಹಜವಾಗಿಯೇ ಏರ್ಪಟ್ಟಿತು. ಕಾಲದ ಬದಲಾವಣೆಗಳಿಗೆ ಅನುಗುಣವಾಗಿ ಬದಲಾಗುವ ಪ್ರಭುತ್ವಗಳಿಗೆ ಬದುಕುವುದು ದುಡಿವ ವರ್ಗಗಳಿಗೆ ಅನಿವಾರ್ಯವೂ ಆಗಿತ್ತು. ಅದರಲ್ಲೂ ಪ್ರದರ್ಶನ ಕಲೆಗಳನ್ನೇ ನಂಬಿಕೊಂಡಿದ್ದ ಡೊಂಬರಂತಹ ಸಮುದಾಯಗಳಂತೂ ಆಳುವ ವರ್ಗದ ಮರ್ಜಿಯನ್ನು ಕಾಯಲೇಬೇಕಿತ್ತು. ಕಾಲದಿಂದ ಕಾಲಕ್ಕೆ ಬದಲಾದ ಆರ್ಥಿಕ ವ್ಯವಸ್ಥೆಗಳಿಗೆ ಈ ಬಗೆಯ ಸಮುದಾಯಗಳು ತಮ್ಮ ಒಗ್ಗಿಸಿಕೊಳ್ಳಲೇ ಬೇಕಿತ್ತು. ಅಲ್ಲದೆ ತಮ್ಮ ಬದುಕಿನ ಚಲನೆಗಳನ್ನು ಬದಲಾದ ಸನ್ನಿವೇಶಕ್ಕೆ ತಕ್ಕಂತೆ ಬದಲಿಸಿಕೊಳ್ಳಬೇಕಿತ್ತು. ಹಾಗಾಗಿ ಅಲೆಮಾರಿ ಸಮುದಾಯವಾದ ಡೊಂಬರು ಕಾಲದ ಅನಿವಾರ್ಯತೆಯಲ್ಲಿ ಅನೇಕ ರೂಪಾಂತರಗಳ ಮೂಲಕ ಹಾದು ಬಂದಿದ್ದಾರೆ.

### ೧. ರಾಜಶಾಹಿ ಕಾಲಘಟ್ಟ

ರಾಜಶಾಹಿ ಕಾಲಘಟ್ಟದಲ್ಲಿ ಡೊಂಬರ ಸಮುದಾಯ ಬೀದಿಯಿಂದ ರಾಜನ ಆಸ್ಥಾನದವರೆಗೂ ವಿಸ್ತರಿಸಿಗೊಂಡಿತು. ಈ ಸಮುದಾಯದ ಸ್ತ್ರೀಯರು ತುಂಬ ರೂಪವತಿಯರು ಹಾಗೂ ಮನಮೋಹಕ ಚೆಲವು ಅವರದು. ನೃತ್ಯ, ಸಂಗೀತ ಮತ್ತು ಕಲೆಗಳಲ್ಲಿ ವಿಶೇಷ ಪರಿಣಿತಿ ಹೊಂದಿದವರು. ಇವರ ಸೌಂದರ್ಯಕ್ಕೆ ಮನಸೋತ ಅರಸರು ಇವರನ್ನು ಪಟ್ಟದ ರಾಣಿಯರನ್ನಾಗಿ ಮಾಡಿಕೊಂಡರು. ರತ್ನಾಜಿ, ಡೊಂಬರ ಚನ್ನಮ್ಮಜ್ಜಿ, ಹಂಸಿ, ನಾಗಲತೆ ಹಾಗೂ ಸಂಗೀತ ವಿದ್ವಾಂಸ ಡೊಂಬರ ರಂಗ. ಇವರ ಕಾಲಘಟ್ಟದಲ್ಲಿ ಡೊಂಬರು ಸಮುದಾಯ ಸಮಾಜದಲ್ಲಿ ತಕ್ಕಮಟ್ಟಿಗೆ ಗೌರವದ ಸ್ಥಾನಮಾನಗಳನ್ನು ಪಡೆದುಕೊಂಡಿರುವುದು ಕಂಡುಬರುತ್ತದೆ.

೧.೧. ರತ್ನಾಜಿ

ಡೊಂಬರನ್ನು ರತ್ನಾಜಿಯ ಮೂಲಕ ಗುರುತಿಸುವುದು ವಾಡಿಕೆ. ಸಮುದಾಯದ ಮೂಲಮಹಿಳೆ ರತ್ನಾಜಿ ಅತಿ ಸೌಂದರ್ಯವತಿ. ಮನಮೋಹಕ ಚೆಲುವು ಹೊಂದಿದ್ದಳು. ಇವಳ ಕುರಿತು ಕಥೆಕರ್ನಾಟಕದ ಎಲ್ಲೆಡೆ ಜನಜನಿತವಾಗಿದೆ.

ಕಂಪಿಲನಾಡನ್ನು, ರಾಜ ಕಂಪಿಲರಾಯ ಆಳುತ್ತಿದ್ದನು. ಇವನ ಪತ್ನಿ ಹರಿಯಲಾದೇವಿ, ಇವರ ಮಗನೇ ಕುಮಾರರಾಮ. ಈತ ಅತ್ಯಂತ ಬಲಶಾಲಿ ರಾಜಕುಮಾರ ಹಾಗೂ ಅತ್ಯಂತ ಸುಂದರನೂ ಆಗಿದ್ದನು. ಇವನನ್ನೇ ಹೋಲುವ ತದ್ರೂಪಿಯಾದ ದಾಸಿ ಮಗನೂ ಇದ್ದನು. ಅವನನ್ನು ಹೋಲಿಕೆ ರಾಮ ಎಂದು ಕರೆಯುತ್ತಿದ್ದರು. ಕುಮಾರರಾಮನನ್ನು ಅನೇಕ ರಾಜ್ಯದ ರಾಜಕುಮಾರಿಯರು ಮದುವೆಯಾಗುವುದಕ್ಕೆ ಬಯಸಿದ್ದರು. ಹಾಗೇನೆ ತೆಲುಗು ರಾಜ್ಯದ ರಾಜಕುಮಾರಿಯಾದ ರತ್ನಾಜಿಯೂ ಆತನನ್ನು ಮದುವೆಯಾಗ ಬಯಸಿದ್ದಳು. ಇವಳು ಡೊಂಬರು ಜಾತಿಗೆ ಸೇರಿದವಳು. ಕಂಪಿಲರಾಯ ಅತ್ಯಂತ ರೂಪವತಿಯಾದ ರತ್ನಾಜಿಯನ್ನು ನೋಡುತ್ತಲೆ ಮನ ಸೋಲುತ್ತಾನೆ. ಮಗುನಿಗೆ ಹೆಣ್ಣು ನೋಡುವುದನ್ನು ಬಿಟ್ಟು ತಾನೆ ಮದುವೆಯಾಗು ಬಯಸುತ್ತಾನೆ. ರತ್ನಾಜಿ ಕುಮಾರರಾಮನನ್ನು ವಿವಾಹವಾಗುವನು ಎಂದು ತಿಳಿದು ಮದುವೆಗೆ ಒಪ್ಪಿಗೆ ನೀಡುತ್ತಾಳೆ. ಕಂಪಿಲರಾಯ ದಾರೆ ಎರೆಯುವ ಸಂದರ್ಭದಲ್ಲಿ ಪಟ್ಟದ ಕತ್ತಿಗೆ ಹಾರಹಾಕುವಂತೆ ಹೇಳುತ್ತಾನೆ. ರತ್ನಾಜಿ ಕುಮಾರರಾಮನೇ ತನ್ನ ಗಂಡ ಎಂದು ತಿಳಿದು ಹಾರ ಹಾಕುತ್ತಾಳೆ. ರತ್ನಾಜಿಯನ್ನು ಬೇರೆ ಅರಮನೆ ನಿರ್ಮಿಸಿ ಇಡಲಾಗುತ್ತದೆ. ಆಗ ತನ್ನ ಗಂಡ ಕುಮಾರರಾಮನಲ್ಲ ಕಂಪಿಲರಾಯ ಎಂದು ತಿಳಿದ ರತ್ನಾಜಿಯ ಹೃದಯ ಒಡೆದು ಹೋಗುತ್ತದೆ. ತನ್ನ ಆಸೆ, ಆಕಾಂಕ್ಷೆ, ಭಾವನೆಗಳು ಕರ್ಪೂರದಂತೆ ಉರಿದು ಹೋಗುತ್ತವೆ. ತನಗೆ ತಾನೆ ಸಮಾಧಾನ ಮಾಡಿಕೊಳ್ಳುತ್ತಾಳೆ. ಆದರೆ ಕುಮಾರರಾಮನ ಮೇಲೆ ಇದ್ದ ಪ್ರೀತಿ ಕುಗ್ಗುವುದಿಲ್ಲ.

ಒಂದು ದಿನ ಕಂಪಿಲರಾಯ ಬೇಟೆಗೆ ಹೋಗಿರುತ್ತಾನೆ. ಆ ಸಂದರ್ಭದಲ್ಲಿ ಕುಮಾರರಾಮ ತಮ್ಮ ಗೆಳೆಯರ ಜೊತೆ ಚೆಂಡಾಟ ಆಡುತ್ತಿರುವಾಗ, ಚೆಂಡು ರತ್ನಾಜಿಯ ಅರಮನೆಯೊಳಗೆ ಹೋಗುತ್ತದೆ. ಅದನ್ನು ತೆಗೆದುಕೊಳ್ಳುವುದಕ್ಕೆ ಕುಮಾರರಾಮ ಬರುತ್ತಾನೆ. ರತ್ನಾಜಿ ಅವನ ಪ್ರೀತಿಗಾಗಿ ಕಾದು ಕುಳಿತಿರುತ್ತಾಳೆ. ಕುಮಾರರಾಮನಿಗೆ ತನ್ನ ಮನದ ಇಚ್ಚೆಯನ್ನು ತಿಳಿಸುತ್ತಾಳೆ. ಕುಮಾರರಾಮ ಇವಳ ಪ್ರೀತಿಯನ್ನು ತಿರಸ್ಕಾರ ಮಾಡುತ್ತಾನೆ. ರತ್ನಾಜಿಗೆ ತನ್ನ ಪ್ರೀತಿಗೆ ಅವಮಾನ ಮಾಡಿದನು ಎಂದು, ಕಂಪಿಲರಾಯ ಬಂದ ತಕ್ಷಣ ಕುಮಾರರಾಮನು ತನ್ನನ್ನು ಬಯಸಿ ಬಂದಿದ್ದನೆಂದು ದೂರು ಹೇಳುತ್ತಾಳೆ. ಅದಕ್ಕೆ ಕಂಪಿಲ ಅವನ ಶಿರವನ್ನು ತೆಗೆಯುವಂತೆ ಆಜ್ಞೆ ಮಾಡುತ್ತಾನೆ. ಮಂತ್ರಿಯು ಉಪಾಯ ಮಾಡಿ

ಹೋಲಿಕೆ ರಾಮನ ತಲೆ ತೆಗೆಯುತ್ತಾನೆ. ಆ ತಲೆಯನ್ನು ತಂದು ರತ್ನಾಜಿಗೆ ತೋರಿಸಲಾಗುತ್ತದೆ. ಹೋಲಿಕೆರಾಮನ ಶಿರ ಆಕಾಶಕ್ಕೆ ಜಿಗಿದು ನಿಂತು ತನ್ನ ತಲೆಯಿಂದ ಬಿದ್ದ ರಕ್ತದ ಒಂದೊಂದು ಹನಿ ಜಾಗದಲ್ಲಿ ರತ್ನಾಜಿಯ ಎದೆಯ ಮೇಲಿನ ಸೆರಗು ತೆಗೆದು ಕುಣಿಸುತ್ತೇನೆ ಎಂದು ಪ್ರತಿಜ್ಞೆ ಮಾಡಿ ಶಿರ ಮಾಯವಾಗುತ್ತದೆ.

ಇತ್ತ ರಾಜ್ಯಕ್ಕೆ ಶತ್ರುಸೈನ್ಯ ಮುತ್ತಿಗೆ ಹಾಕುತ್ತದೆ. ಅತಂಹ ಸಂದರ್ಭದಲ್ಲಿ ಮಂತ್ರಿ ಕುಮಾರರಾಮನನ್ನು ಹೊರತರುತ್ತಾನೆ. ಕುಮಾರರಾಮ ಹೋರಾಡಿ ರಾಜ್ಯವನ್ನು ಉಳಿಸಿಕೊಳ್ಳುತ್ತಾನೆ. ಕಂಪಿಲರಾಯನಿಗೆ ನಡೆದ ಸಂಗತಿಯನ್ನು ತಿಳಿಸುತ್ತಾನೆ. ಕಂಪಿಲರಾಯ ರತ್ನಾಜಿಯನ್ನು ಶಿರವನ್ನು ತೆಗೆಯುವಂತೆ ಆಜ್ಞೆ ಮಾಡುತ್ತಾನೆ. ರತ್ನಾಜಿಯ ಮರಣದ ನಂತರ ಇವಳ ಇಬ್ಬರು ಹೆಣ್ಣುಮಕ್ಕಳನ್ನು ಕುಮಾರರಾಮನ ಆಗಮನ ಸಂಭ್ರಮ ಸಂದರ್ಭದಲ್ಲಿ ಸಡಗರದ ಮಧ್ಯದಲ್ಲಿ ಕುಣಿಯುವಂತೆ ಮಾಡುತ್ತಾರೆ. ಮುಂದೆ ಇವರು ಅಲೆಯುತ್ತಹೋಗಿ ಗುಂಪುಗಳನ್ನು ಕಟ್ಟಿಕೊಂಡರು. ಈ ಗುಂಪುಗಳೇ ಮುಂದೆ ಡೊಂಬರ ಗುಂಪುಗಳಾಗಿ ಕಾಣಿಸಿಕೊಂಡವು.

### ೧.೨. ಡೊಂಬರ ಚನ್ನಮ್ಮ

ರತ್ನಾಜಿಯ ಕಾಲದಿಂದ ಡೊಂಬರ ಗುಂಪುಗಳು ಬೀದಿರಂಗಗಳಿಗೆ ಪ್ರವೇಶ ಮಾಡಿತು. ನೃತ್ಯ, ಸಂಗೀತ, ವಿವಿಧ ಕಸರತ್ತು ಕಲೆಗಳ ಪ್ರದರ್ಶಿಸಿಸುವ ವೃತ್ತಿಯನ್ನೇ ಬೆಳೆಸಿಕೊಂಡು ಬಂದರು. ಇದೇ ಅಲೆಮಾರಿ ಸಮುದಾಯದವಳಾದ ಡೊಂಬರ ಚನ್ನಮ್ಮ ತುಂಬಾ ಸುಂದರವಾಗಿದ್ದಳು. ತನ್ನದೇ ಆದ ಚಿಕ್ಕ ಡೊಂಬರಾಟದ ಗುಂಪು ಕಟ್ಟಿಕೊಂಡು, ಅದರ ನಾಯಕಿಯಾಗಿ ಊರಿನಿಂದ ಊರಿಗೆ ಹೋಗುತ್ತಿದ್ದಳು.

ಗರದಿಗೆ ಎಂಬ ಪ್ರದೇಶವನ್ನು ಬಿಲ್ಲಮರಾಜ ಆಳುತ್ತಿದ್ದನು. ಇವನಿಗೆ ಗುರುವೇ ಸರ್ವಸ್ವವಾಗಿದ್ದು. ಪ್ರತಿಯೊಂದು ಕೆಲಸವನ್ನು ಆಜ್ಞೆಯ ಮೂಲಕ ಕೈಗೊಳ್ಳುತ್ತಿದ್ದ, ಗುರುಗಳ ಕುರಿತು ತುಂಬ ಗೌರವವಿತ್ತು. ಒಂದುದಿನ ಡೊಂಬರ ಗುಂಪೊಂದು ರಾಜನ ಒಳಗೆ ಬಂದು, ನಮಸ್ಕಾರ ಮಾಡಿ ತಮ್ಮ ಆಟವನ್ನು ವೀಕ್ಷಿಸುವಂತೆ ಕೇಳಿಕೊಂಡರು. ರಾಜ ಮೊದಲು ಗುರುಗಳು ನೋಡುತ್ತಾರೆ. ಅವರನ್ನು ಮೆಚ್ಚಿಸಿ ಬನ್ನಿ ಎಂದು ಹೇಳುತ್ತಾನೆ. ಉದ್ಯಾನವನದಲ್ಲಿ ಇದ್ದ ಗುರುಗಳನ್ನು ಕಂಡು ಡೊಂಬರು ನಮಸ್ಕಾರ ಮಾಡುತ್ತಾರೆ. ಡೊಂಬರ ಗುಂಪಿನ ನಾಯಕ ಚಾಮಯ್ಯನನ್ನು ಗುರುಗಳು ತಲೆ ಎತ್ತಿ ನೋಡುವುದಿಲ್ಲ. ಚಾಮಯ್ಯ ತನ್ನ ಸಂಗಡಿಗರ ಜೊತೆಗೂಡಿ ಅನೇಕ ಕಸರತ್ತುಗಳನ್ನು ಪ್ರದರ್ಶನ ಮಾಡುತ್ತಾನೆ. ವಿವಿಧ ರೀತಿಯ ಕಲೆಗಳನ್ನು ಸಂಗೀತ ನೃತ್ಯಗಳನ್ನು ಪ್ರದರ್ಶನ ನೀಡುತ್ತಾರೆ. ಆದರೆ ಗುರುಗಳು ಇವರ ಕಡೆ ತಲೆ ಎತ್ತಿ ಸಹ ನೋಡಲಿಲ್ಲ. ಚಾಮಯ್ಯ ಬೇಸರಗೊಂಡು ಗುಡಾರಕ್ಕೆ ಬರುತ್ತಾನೆ. ಮಗಳು

ಚನ್ನಮ್ಮಳಿಗೆ ನಡೆದ ವಿಷಯವನ್ನು ತಿಳಿಸುತ್ತಾನೆ. ಚಿಂತಿಸಬೇಡಿ ಅವರನ್ನು ನಮ್ಮ ಗುಡಾರಕ್ಕೆ ಬರುವಂತೆ ಮಾಡುತ್ತಾನೆ ಎಂದು ಸಮಾಧಾನ ಮಾಡುತ್ತಾಳೆ.

ಮರುದಿನವೇ ಚನ್ನಮ್ಮ ಗುರುಗಳ ಬಳಿ ಹೋಗಲು ಸಿದ್ಧವಾಗುತ್ತಾಳೆ. ಅತಿ ಸುಂದರವಾಗಿ ಶೃಂಗಾರ ಮಾಡಿಕೊಂಡು ಗುರುಗಳ ಒಳಗೆ ಬಂದು ನಮಸ್ಕಾರ ಮಾಡುತ್ತಾಳೆ. ಗುರುಗಳು ತಲೆಯೆತ್ತಿ ಸಹ ನೋಡುವುದಿಲ್ಲ. ಚನ್ಮಮ್ಮ ಸಂಗೀತ, ನೃತ್ಯ ಪ್ರಾರಂಭ ಮಾಡುತ್ತಾಳೆ. ಅವಳ ಮನಮೋಹಕ ಧ್ವನಿ ಗುರುಗಳ ಮನಸ್ಸನ್ನು ಸೆಳೆಯುತ್ತದೆ. ಚನ್ನಮ್ಮನನ್ನು ನೋಡಿದ ತಕ್ಷಣವೇ ಗುರುಗಳು ಅವಳ ಸೌಂದರ್ಯಕ್ಕೆ ಮಾರುಹೋಗುತ್ತಾರೆ. ಗುರುಗಳು ವಿರಹ ವೇದನೆ ತಾಳಲಾರದೆ ಚನ್ನಮ್ಮಳ ಬಳಿ ಪ್ರೇಮ ಭಿಕ್ಷೆಯನ್ನು ಬೇಡುತ್ತಾರೆ. ಅಧರಾಮೃತಪಾನ ನೀಡದಿದ್ದರೆ ಒಂದು ಕ್ಷಣವು ಇರಲಾರೆ ಎಂದು ಹೇಳುತ್ತಾರೆ. ಅದಕ್ಕೆ ನೀವು ರಾಜಗುರುಗಳು ಹೀಗೆ ಹೇಳಬಹುದೇ, ಇದು ಧರ್ಮವೇ ಎಂದಾಗ ಅದಕ್ಕೆ ಗುರುಗಳು ಮತ್ತೆ ಮತ್ತೆ ಪ್ರೇಮಭಿಕ್ಷೆ ಬೇಡುತ್ತಾನೆ. ಚನ್ನಮ್ಮಳನ್ನು ಅಲಿಂಗನ ಮಾಡಿಕೊಳ್ಳುತ್ತಾನೆ. ಪ್ರೇಮಸಾಗರದಲ್ಲಿ ಮುಳುಗುತ್ತಾರೆ. ಬೆಳಗಾಗುತ್ತಲೇ ಚನ್ಮಮ್ಮ ಹೊರಡುವೆನು ಎಂದು ಹೇಳಿದಾಗ ಗುರುಗಳು ನಿನ್ನ ಬಿಟ್ಟು ಒಂದು ಕ್ಷಣ ಇರಲಾರೆ ಇಂತ ಸಂದರ್ಭದಲ್ಲಿ ನನ್ನನ್ನು ಬಿಟ್ಟು ಹೋಗಬಹುದೇ ಎಂದು ಅಂಗಲಾಚುತ್ತಾರೆ. ಅವಳು ಒಂದು ಕ್ಷಣದಲ್ಲಿ ಮರಳಿ ಬರುವುದಾಗಿ ಹೇಳಿ ಹೋಗುತ್ತಾಳೆ.

ಚನ್ನಮ್ಮ ತಮ್ಮವರಲ್ಲಿಗೆ ನಡೆದ ಸಂಗತಿ ಎಲ್ಲಾ ಹೇಳುತ್ತಾಳೆ. ರಾಜನ ಬಳಿಗೆ ಹೋಗಿ ಅಪ್ಪಣೆ ಕೇಳಿ ಬರುವುದಾಗಿ ತನ್ನ ತಂದೆಗೆ ಹೇಳಿ ಹೋಗುತ್ತಾಳೆ. ಅರ್ಧನಾರೀಶ್ವರ ವೇಷಧರಿಸಿ ಸಭಾಂಗಣಕ್ಕೆ ನಮಸ್ಕಾರ ಮಾಡಿ ಅರೆ ಗಳಿಗೆಯಲ್ಲಿ ಮಾಯವಾಗಿ ನಿಲ್ಲುತ್ತಾಳೆ. ಈ ಚಮತ್ಕಾರಕ್ಕೆ ಮೆಚ್ಚಿ ರಾಜ ಬಹುಮಾನ ನೀಡುತ್ತಾನೆ. ಇತ್ತ ಚನ್ನಮ್ಮಳ ಬರುವುಕೆಯನ್ನು ಕಾತರಿಸಿ ಕುಳಿತುಕೊಂಡಿದ್ದ ಗುರುಗಳು ವಿರಹ ವೇದನೆಯನ್ನು ತಾಳಲಾರದ ಚನ್ನಮ್ಮಳ ಗುಡಾರಕ್ಕೆ ಬರುತ್ತಾರೆ. ಚನ್ನಮ್ಮ ಮಲಗಿರುವುದನ್ನು ನೋಡಿ ಅವಳ ಹತ್ತಿರ ಹೋಗಿ ಕೆನ್ನೆಯನ್ನು ಸವರುತ್ತಾರೆ. ಎಚ್ಚರಗೊಂಡ ಚನ್ನಮ್ಮ ಗುರುಗಳಿಗೆ ಕ್ಷಮೆ ಯಾಚಿಸುತ್ತಾಳೆ. ನಂತರ ಗುರುಗಳನ್ನು ಚನ್ನಮ್ಮ ಆಲಂಗಿಸಿಕೊಂಡು ಸರಸ ಸಲ್ಲಾಪದಲ್ಲಿ ತೇಲುವಂತೆ ಮಾಡುತ್ತಾಳೆ. ಈ ನಾಡು ಬಿಟ್ಟು ಹೋಗುವುದಾಗಿ ಹೇಳುತ್ತಾಳೆ. ನಿನ್ನನ್ನು ಬಿಟ್ಟು ಒಂದು ಕ್ಷಣ ಇರಲಾರೆ ಎಂದು ಹೇಳುತ್ತಾನೆ. ಅದಕ್ಕೆ ನಾನು ನಿಮ್ಮನ್ನೆ ಬಿಟ್ಟಿರುವುದಕ್ಕೆ ಆಗುವುದಿಲ್ಲ. ಅನಿವಾರ್ಯವಾಗಿ ಹೋಗಲೇಬೇಕು ಎಂದಾಗ ನೀನು ನನ್ನ ಜೊತೆಯಲ್ಲಿ ಇರು ಎಂದು ಹೇಳುತ್ತಾರೆ. ನಮ್ಮ ಜನ ಇದಕ್ಕೆ ಒಪ್ಪುವುದಿಲ್ಲ ಎಂದು ಹೇಳುತ್ತಾಳೆ. ಅದಕ್ಕೆ ಗುರುಗಳು ನಾನೇ ನಿಮ್ಮ ಜೊತೆ ಬರುವುದಾಗಿ ಹೇಳುತ್ತಾರೆ. ಡೊಂಬರ ಗುಂಪಿನ ಜೊತೆ ಗುರುಗಳು ಕಾಶಿಗೆ ಹೋಗುತ್ತಾರೆ. ಬಿಲ್ಲಮರಾಜ ಗುರುಗಳನ್ನು ಕಾಣದೆ

ಕಲ್ಲಾಗಿ ದೂತರನ್ನು ಹುಡುಕಿಕೊಂಡು ಬರುವುದಕ್ಕೆ ಕಳಿಸುತ್ತಾನೆ. ಗುರುಗಳು ಡೊಂಬರ ಗುಂಪಿನ ಜೊತೆ ಇರುವುದನ್ನು ದೂತರು ತಿಳಿಸುತ್ತಾರೆ. ರಾಜನು ಗುರುಗಳನ್ನು ಕರೆದುಕೊಂಡು ಬರುವುದಕ್ಕೆ ಕಾಶಿಗೆ ಬರುತ್ತಾನೆ. ಚನ್ನಮ್ಮಳ ಗುಡಾರದಲ್ಲಿ ಊಟಕ್ಕೆ ಕುಳಿತ ಗುರುಗಳನ್ನು ಕಂಡು ನಮಸ್ಕಾರ ಮಾಡುತ್ತಾನೆ. ಪ್ರಸಾದವನ್ನು ಕೇಳುತ್ತಾನೆ. ಗುರುಗಳು ಕರುಣಿಸುತ್ತಾರೆ.

ಇಲ್ಲಿ ಎರಡು ಕಥೆಗಳು ಡೊಂಬರ ಸಮುದಾಯದ ಅಂದಿನ ಚರಿತ್ರೆಯನ್ನು ಹೇಳುತ್ತವೆ. ಒಂದು ರತ್ನಾಜಿಯ ಕಥೆ, ರತ್ನಾಜಿಗೆ ತನ್ನ ಭವಿಷ್ಯದ ಕುರಿತು ಯಾವ ಆಯ್ಕೆಗಳಿಲ್ಲ. ಕುಮಾರರಾಮನನ್ನು ಸಹಜವಾಗಿಯೇ ಒಪ್ಪಿ ಮದುವೆಯಾಗಲು ಸಿದ್ಧವಾದ ರತ್ನಾಜಿಗೆ ಕಂಪಿಲ ಮೋಸ ಮಾಡುತ್ತಾನೆ. ರತ್ನಾಜಿ ಮುದುಕನನ್ನು ಮದುವೆಯಾಗುವ ಅನಿವಾರ್ಯತೆ ಏರ್ಪಡುತ್ತದೆ. ರತ್ನಾಜಿ ತಾನು ಇಷ್ಟಪಟ್ಟ ಕುಮಾರರಾಮನನ್ನು ಕೂಡಿ ಆದ ಮೋಸಕ್ಕೆ ಪ್ರತೀಕಾರ ಮಾಡಬೇಕೆಂದು ಹವಣಿಸುತ್ತಿರುತ್ತಾಳೆ. ಕೊನೆಗೆ ಅದರಲ್ಲಿ ವಿಫಲಳಾಗಿ ಅನೇಕ ದುರಂತಗಳು ನಡೆದು ಹೋಗುತ್ತವೆ. ರತ್ನಾಜಿ ನಡೆದ ಎಲ್ಲ ದುರಂತಗಳಿಗೆ ಕಾರಣಳಾಗಿ ಚರಿತ್ರೆಯ ಉದ್ದಕ್ಕೂ ಖಳನಾಯಕಿಯಾಗಿ ಚಿತ್ರಿಸಲ್ಪಟ್ಟಿದ್ದಾಳೆ. ಆದರೆ ಪುರುಷಶಾಹಿ ಸಮಾಜ, ಕಂಪಿಲ ರತ್ನಾಜಿಯನ್ನು ವಂಚಿಸಿದ ಪ್ರಕರಣಕ್ಕೆ ಹೆಚ್ಚು ಒತ್ತು ಕೊಡುವುದೇ ಇಲ್ಲ. ಹೆಣ್ಣನ್ನು ಕೇವಲ ಭೋಗದ ವಸ್ತುವೆಂದೇ ಪರಿಗಣಿಸಿದ ಕಂಪಿಲನ ಸನಾತನ ನಡುವಳಿಕೆಯನ್ನು ಯಾರೂ ಪ್ರಶ್ನಿಸುವುದೇ ಇಲ್ಲ. ಹೆಣ್ಣಿನ ಆಯ್ಕೆ ಸ್ವಾತಂತ್ರ್ಯವನ್ನು ನಿರಾಕರಿಸುವ ಪುರುಷಪ್ರಧಾನ ಸಮಾಜದ ಯಜಮಾನಿಕೆ ಗೌಣವಾಗಿ, ಸಹಜ ರೀತಿಯಲ್ಲಿ ಕುಮಾರರಾಮನನ್ನು ಆಸೆಪಟ್ಟ ರತ್ನಾಜಿಯನ್ನು ಎಲ್ಲೆಡೆ ಖಳನಾಯಕಿಯನ್ನಾಗಿಸುವ ಪ್ರಯತ್ನಗಳು ಚರಿತ್ರೆಯ ಉದ್ದಕ್ಕೂ ನಡೆದುಕೊಂಡು ಬಂದಿವೆ.

ಇನ್ನು ಚನ್ನಮ್ಮಳ ಡೊಂಬರಾಟದ ಗುಂಪನ್ನು ರಾಜ ಮತ್ತು ರಾಜಗುರು ಇಬ್ಬರೂ ಅವಮಾನಿಸುತ್ತಾರೆ. ಆದರೆ ಡೊಂಬರ ಗುಂಪು ತನ್ನ ಕೌಶಲಗಳಿಂದ ಅವರನ್ನು ಗೆಲ್ಲುತ್ತದೆ. ರಾಜಗುರುವೇ ಚನ್ನಮ್ಮಳ ಸೌಂದರ್ಯಕ್ಕೆ ಮನಸೋತು ಅವಳ ಬೆನ್ನು ಬೀಳುತ್ತಾರೆ. ಒಟ್ಟಿನಲ್ಲಿ ರಾಜಶಾಹಿ ಕಾಲಘಟ್ಟದಲ್ಲಿ ಡೊಂಬರು ಅಲೆಮಾರಿಗಳಾಗಿಯೇ ಇದ್ದು, ಪ್ರದರ್ಶನದ ಕಲೆಗಳನ್ನು ನಂಬಿಕೊಂಡೇ ಬದುಕನ್ನು ನಡೆಸುವ ಅನಿವಾರ್ಯತೆ ಇತ್ತು ಎಂದು ಈ ಎರಡು ಕಥೆಗಳಿಂದ ಕಂಡುಬರುತ್ತದೆ.

### ೨. ಮಧ್ಯಕಾಲೀನ ಕಾಲಘಟ್ಟದಲ್ಲಿ ಡೊಂಬರು

"ಸಂಡೂರು ಅರಸರ ಕಾಲದಲ್ಲಿ ಡೊಂಬರ ಒಂದು ಗುಂಪು ಅಲೆಯುತ್ತಾ ಸಂಡೂರಿಗೆ ಬಂತು. ತಮ್ಮ ಕಲೆ ಪ್ರದರ್ಶನ ಅರಸರ ಮನ್ನಣೆ ಪಡೆದುಕೊಂಡರು. ಈ ಗುಂಪಿನ ನಾಯಕಿ ಸತ್ಯಮ್ಮ. ಇವಳು ಸಹಜವಾಗಿಯೇ ಸುಂದರಿ. ಹಾಗೂ ತುಂಬ ಬುದ್ಧಿವಂತೆಯಾಗಿದ್ದಳು. ಇವಳು ಮತ್ತು ಇವಳ ಸಂಗಡಿಗರು

ಜೊತೆಗೂಡಿ ಅರಸ ನೇತೃತ್ವದಲ್ಲಿ ಅರಮನೆ ಮುಂದೆ ವಿವಿಧ ರೀತಿಯ ಕಸರತ್ತು ನೃತ್ಯ, ಸಂಗೀತ, ಕಲೆ ಪ್ರದರ್ಶನಗಳನ್ನು ನೀಡಿದರು. ಸತ್ಯಮ್ಮಳ ಸೌಂದರ್ಯಕ್ಕೆ ಕಣ್‌ಮನ ಸೋಲುವ ನೃತ್ಯ ಸಂಗೀತವನ್ನು ಕೇಳಿದ ಅರಸ ಮನಸೋತು 'ನಿನಗೆ ಏನು ಬೇಕು ಬೇಡಿಕೋ ಕೊಡುವೆನು' ಎಂದು ಹೇಳುತ್ತಾನೆ. ಅದಕ್ಕೆ ಸತ್ಯಮ್ಮ ಯೋಚಿಸಿ ಬಿಲ್ವಿದ್ಯೆಯಲ್ಲಿ ತುಂಬ ಪ್ರವೀಣ್ಯತೆಯನ್ನು ಪಡೆದುಕೊಂಡಿದ್ದಳು. 'ಒಂದು ಸ್ಥಳದಿಂದ ಬಾಣ ಹೊಡೆಯುತ್ತಾನೆ ಆ ಬಾಣ ಎಲ್ಲಿ ಮುಟ್ಟುತ್ತದೆಯೋ ಅಲ್ಲಿಯವರೆಗೆ ಭೂಮಿಯನ್ನು ಬಿಟ್ಟು ಕೊಡಬೇಕು ಎಂದು ಕೇಳುತ್ತಾಳೆ. ಅದಕ್ಕೆ ಅರಸ ಕೇವಲ ಒಂದು ಹೆಣ್ಣು ಎಷ್ಟೋ ದೂರ ಬಾಣ ಹೊಡಯಬಲ್ಲಳು ಎಂದು ಒಪ್ಪಿಗೆ ನೀಡುತ್ತಾನೆ. ಅದಕ್ಕೆ ಸತ್ಯಮ್ಮ ಹೆಗಲಿಗೆ ಧನಸ್ಸು ಏರಿಸಿ ನಿಂತು ಬಾಣ ಹೊಡೆಯುತ್ತಾಳೆ. ಆ ಬಾಣವು ಅರಸರ ಜಮೀನಿನ ಅರ್ಧಭಾಗ ಒಳಗೊಂಡ ನಾಲ್ಕು ದಿಕ್ಕನ್ನು ಸುತ್ತಿ ನಿಲ್ಲುತ್ತದೆ. ಸತ್ಯಮ್ಮಳ ಕೈಚಳಕ ನೋಡಿ ಆಶ್ಚರ್ಯಗೊಂಡು ಸತ್ಯಮ್ಮಳಿಗೆ ಮತ್ತು ಇವಳ ಗುಂಪಿನವರಿಗೆ ಸ್ವಲ್ಪ ಭೂಮಿಯನ್ನು ಮಾತ್ರ ಸಂಡೂರಿನ ಅರಸ ಕೊಡುತ್ತಾನೆ."[೨]

ಈ ಒಂದು ಕಾಲಘಟ್ಟದಲ್ಲಿ ಡೊಂಬರು ನೆಲೆ ನಿಲ್ಲುವುದಕ್ಕೆ ಇಚ್ಚೆ ಪಡುತ್ತಿದ್ದರು. ಕೆಲವು ಕೃಷಿಯನ್ನು ಅವಂಬಿಸಿದರೆ ಕೆಲವರು ಕಲೆಯನ್ನು ಅವಲಂಬಿಸಿದರು. ವಿಜಯನಗರದ ಅರಸರಿಗೆ ಅದರಲ್ಲೂ ಕೃಷ್ಣದೇವರಾಯನಿಗೆ ಡೊಂಬರೆಂದರೆ ಅಚ್ಚುಮೆಚ್ಚು, ಅವನ ಕಿರಿಯ ರಾಣಿ ಚಿನ್ನಾದೇವಿ ಡೊಂಬರ ಜನಾಂಗಕ್ಕೆ ಸೇರಿದವಳು. ಕೃಷ್ಣದೇವರಾಯ ಡೊಂಬರಾಟವನ್ನು ನೋಡುತ್ತಿದ್ದಾಗಲೇ ಆ ಗುಂಪಿನಲ್ಲಿದ್ದ ಚೆನ್ನಾದೇವಿಯನ್ನು ನೋಡಿ ಪ್ರೇಮಿಸಿ ಮದುವೆಯಾಗಿದ್ದನು. ವಿಜಯನಗರದ ದಸರಾ ಮೆರವಣಿಗೆಯಲ್ಲಿ ಡೊಂಬರಾಟವು ಪ್ರಧಾನ ಪಾತ್ರವಹಿಸುತ್ತಿತ್ತು. ಈ ಕಾಲಘಟ್ಟದಲ್ಲಿ ಡೊಂಬರು ಹೆಚ್ಚು ಕಡಿಮೆ ಡೊಂಬರಾಟವನ್ನೇ ನೆಚ್ಚಿಕೊಂಡು ರಾಜಾಶ್ರಯದಲ್ಲಿಯೇ ಬದುಕುವ ಅನಿವಾರ್ಯತೆ ಏರ್ಪಟ್ಟಿತ್ತು. ನಿಶ್ಚಿತ ಆದಾಯ ಮೂಲಗಳಿದ್ದರೂ ಡೊಂಬರು ತಮ್ಮ ಅಲೆಮಾರಿತನದಿಂದ ಅವುಗಳನ್ನು ನೆಚ್ಚಿಕೊಳ್ಳಲಿಲ್ಲ.

### ೩. ವಸಾಹುತಶಾಹಿ ಕಾಲಘಟ್ಟದಲ್ಲಿ ಡೊಂಬರು

ವಸಾಹತುಶಾಹಿ ಕಾಲಘಟ್ಟದಲ್ಲಿ ಅನ್ಯದೇಶದಿಂದ ವ್ಯಾಪಾರಕ್ಕಾಗಿ ಬಂದ ಪರಕೀಯರ ಆಳ್ವಿಕೆಗೆ ಭಾರತ ಒಳಗಾಯಿತು. ವಿದೇಶಿಯರ ಜೊತೆ ಅವರ ಉತ್ಪಾದನಾ ವ್ಯವಸ್ಥೆ, ಭಾಷೆ, ಧರ್ಮ, ಆಚರಣೆ, ಸಾಹಿತ್ಯ ಮತ್ತು ಕಲೆಗಳಲ್ಲಿ ಭಾರತಕ್ಕೆ ವಲಸೆ ಬಂದವು. ವಿದೇಶಿಯರ ಕ್ರಾಂತಿಕಾರಕ ಉತ್ಪಾದನಾ ವ್ಯವಸ್ಥೆಯು ಭಾರತದಂತಹ ಸಂಪ್ರದಾಯಬದ್ಧ ಉತ್ಪಾದನಾ ಶೈಲಿಯನ್ನು ನಾಶಮಾಡಿ ಹೊಸ ವ್ಯವಸ್ಥೆಯನ್ನು ಹುಟ್ಟುಹಾಕಿತು. ದೇಶೀಯ ಕಲೆಗಳು, ವಿದೇಶಿ ಕಲೆಗಳ ಜೊತೆ ಸಂಕರಗೊಂಡು ಹೊಸ ರೀತಿಯಲ್ಲಿ ಅಭಿವ್ಯಕ್ತಿಗೊಂಡವು. ಆಧುನಿಕತೆ, ವಸಾಹತುಶಾಹಿ ಆಡಳಿತದ ಜೊತೆ ಜೊತೆಯಲ್ಲಿಯೇ ಭಾರತಕ್ಕೆ

ಬಂದಿತು. ಭಾರತದ ಸಂಪ್ರದಾಯಶೀಲ ಸಮಾಜದಲ್ಲಿ ಆಧುನಿಕತೆಯಿಂದ ಅನೇಕ ಸುಧಾರಣೆಗಳಾದರೂ, ದುರ್ಬಲ ವರ್ಗಗಳಿಗೆ ಮತ್ತು ದೇಶೀಯ ಪಾರಂಪರಿಕ ಉತ್ಪಾದನಾ ವ್ಯವಸ್ಥೆಯಲ್ಲಿ ತೊಡಗಿಕೊಂಡಿದ್ದ ದುಡಿವ ವರ್ಗಕ್ಕೆ ಆಡಳಿತದಲ್ಲಿ ಯಾವ ಅವಕಾಶಗಳು ಇಲ್ಲದಂತಾದವು.

ಯುರೋಪ್ ಮತ್ತು ರಷ್ಯಾಗಳ ಕಡೆಯಿಂದ ಬಂದ ಸರ್ಕಸ್ ಕಂಪನಿಗಳು ಡೊಂಬರಾಟವನ್ನು ಮೂಲೋತ್ಪಾಟನೆ ಮಾಡಿದವು. ಸರ್ಕಸ್‌ಗಳ ಅದ್ಭುತ ಚಮತ್ಕಾರಗಳು ಡೊಂಬರಾಟಕ್ಕೆ ಮಂಕು ಹಿಡಿಸಿದವು. ಸಾಂಪ್ರದಾಯಿಕ ರಾಜಾಶ್ರಯ ಡೊಂಬರಿಗೆ ಈ ಕಾಲಘಟ್ಟದಲ್ಲಿ ತಪ್ಪಿಹೋಯಿತು. ವಿವಿಧ ರಾಜರು ಉಂಬಳಿಯಾಗಿ ಕೊಡಮಾಡಿದ್ದ ಜಮೀನುಗಳು ಆಳುವ ವರ್ಗಗಳ ಪಾಲಾದವು. ಡೊಂಬರು ಈ ಹಂತದಲ್ಲಿ ಅಕ್ಷರಶಃ ನಿರ್ಗತಿಕರಾದರು. ದೇಶೀಯ ಸಂಸ್ಥಾನಗಳು ಒಂದೊಂದೇ ಇಲ್ಲವಾಗತೊಡಗಿದ ಮೇಲೆ ಡೊಂಬರು ಬೀದಿಗೆ ಬಂದರು. ಒಟ್ಟಿನಲ್ಲಿ ವಸಾಹತು ಕಾಲಘಟ್ಟದಲ್ಲಿ ಸರ್ಕಸ್‌ಗಳಿಗೆ ಜನರು ಹೆಚ್ಚಿನ ಮನ್ನಣೆಯನ್ನು ನೀಡಿದರು. ಈ ಕಂಪನಿಗಳು ಇನ್ನೂ ಹೆಚ್ಚಿಕೊಂಡವು. ಈ ಕಂಪನಿಗಳ ಜೊತೆ ಸ್ಪರ್ಧೆ ಮಾಡುವ ಸಾಮರ್ಥ್ಯವಿರಲಿಲ್ಲ. ಆರ್ಥಿಕ ಸ್ಥಿತಿಯಲ್ಲಿ ತುಂಬ ಕೆಳಮಟ್ಟದಾಗಿದ್ದವು. ಡೊಂಬರಾಟಕ್ಕೆ ಜನಮನ್ನಣೆಯಿಲ್ಲದೆ ಡೊಂಬರು ತಮ್ಮ ವೃತ್ತಿಯನ್ನು ಕೈಬಿಡಬೇಕಾಯಿತು. ಇವರು ಅನೇಕ ಕೆಳದರ್ಜೆಯ ವೃತ್ತಿಗಳಿಗೆ ಅನಿವಾರ್ಯವಾಗಿ ಹೊಂದಿಕೊಳ್ಳಬೇಕಾಯಿತು.

ಹೀಗಾಗಿ ಇವರು ಕೃಷಿ, ಕರಕುಶಲ ಕಲೆ ಹಾಗೂ ಕೆಳದರ್ಜೆಯ ವೃತ್ತಿಗಳಲ್ಲಿ ತೊಡಗಿಸಿಕೊಂಡರು. ವೃತ್ತಿಗಾಗಿ ತಮಗೆ ಅನಕೂಲವಾದ ಸ್ಥಳಗಳಲ್ಲಿ ನೆಲೆನಿಂತರು. ಈ ಸಮುದಾಯ ಬದಲಾವಣೆಯಾಗುವುದಕ್ಕೆ ಕಾರಣವಾಯಿತು.

### ೪. ವರ್ತಮಾನದಲ್ಲಿ ಡೊಂಬರು

ಆಧುನಿಕ ಸಮಾಜದ ಪರಿವರ್ತನೆಯಿಂದ ಡೊಂಬರ ಸಮುದಾಯ ಸಹ ಬದಲಾವಣೆಗೊಂಡಿದೆ. ಆಧುನಿಕರಣದ ಪ್ರಭಾವದಿಂದ ಈ ಸಮುದಾಯ ಬದಲಾವಣೆಯಾಗಿದೆ. ತಮ್ಮ ಮೂಲವೃತ್ತಿಯನ್ನು ಕೈಬಿಟ್ಟು ಕೃಷಿ, ಕುಶಲಕಲೆ, ಇತರೆ ಕೆಳದರ್ಜೆಯ ಅನೇಕ ವೃತ್ತಿಗಳಿಗೆ ತೊಡಗಿಸಿಕೊಂಡಿದೆ. ಇದೇ ಇವರ ವೃತ್ತಿ ಎಂದು ಗುರುತಿಸುವುದು ಎನ್ನುವುದಕ್ಕೆ ಸಾಧ್ಯವಿಲ್ಲ. ಇವರ ಕಸುಬುಗಳಲ್ಲಿ ಅಗಾಧ ಬದಲಾವಣೆಗಳಾಗಿವೆ.

ಇತ್ತೀಚಿನ ದಿನಗಳಲ್ಲಿ ಶಾಲಾಕಾಲೇಜುಗಳನ್ನು ಸೇರಿ ಪದವಿಧರರಾಗಿ ಸ್ನಾತಕೋತ್ತರ ಪದವಿಗಳನ್ನು ಪಡೆದು ಕೆಲವರು ಉನ್ನತ ಹುದ್ದೆಗಳನ್ನು ಪಡೆದುಕೊಂಡಿದ್ದಾರೆ. ಶಿಕ್ಷಕರಾಗಿ, ಅಧ್ಯಾಪಕರಾಗಿ ಇತ್ಯಾದಿ ಸರಕಾರಿ ಇಲಾಖೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ.

ಕೇವಲ ವೃತ್ತಿಯಲ್ಲಿ ಅಷ್ಟೆ ಅಲ್ಲದೆ, ಇವರ ಸಾಂಸ್ಕೃತಿಕ ಆಚರಣೆಗಳಲ್ಲೂ ಸಹ ಬದಲಾವಣೆಗಳು ಕಂಡುಬರುತ್ತವೆ. ಆ ಸಮುದಾಯದ ಪ್ರಮುಖ ದೇವತೆ ಎಲ್ಲಮ್ಮ ದೇವರ ಪೂಜೆ ಮಾಡುತ್ತಾರೆ. ಆದರೆ ದೇವದಾಸಿ ಬಿಡುವುದು, ಬಸವಿ ಬಿಡುವುದು, ದೇವರು ಹೋರಿಸುವುದು ಮುಂತಾದ ಹೀನ ಪದ್ಧತಿಗಳನ್ನು ಕೈಬಿಟ್ಟಿದ್ದಾರೆ. ಹಾಗೂ ಇವರು ಪ್ರಗತಿಪರವಾಗಿ ಯೋಚಿಸುತ್ತಿದ್ದಾರೆ.

ಈ ಸಮುದಾಯದಲ್ಲಿ ಕೆಲವೇ ಕುಟುಂಬಗಳು ಅಭಿವೃದ್ಧಿ ಹೊಂದಲು ಯತ್ನಿಸುತ್ತಿವೆ. ಆದರೆ ಸು. ೮೦ರಷ್ಟು ಕುಟುಂಬಗಳು ಬಡತನ ರೇಖೆಯಿಂದ ಕೆಳಗಡೆ ಇದ್ದರೆ, ವಾಸಿಸುವುದಕ್ಕೆ ಮನೆಗಳು ಸಹ ಇಲ್ಲದೇ, ದುಡಿಯಲು ಹೊಲ ಇಲ್ಲದೆ, ಕೂಲಿ ಕೆಲಸ, ಆಟೋರಿಕ್ಷಾ, ಹೂ ಮಾರುವುದು, ಚಿಕ್ಕಪುಟ್ಟ ವ್ಯಾಪಾರಗಳಲ್ಲಿ ತೊಡಗಿದ್ದಾರೆ. ಈ ಸಮುದಾಯದಲ್ಲಿ ಹೆಚ್ಚಿನವರು ಅನಕ್ಷರಸ್ಥರಾಗಿದ್ದಾರೆ, ಕೆಲವರು ರಂಗನಟಿಯರಾಗಿದ್ದಾರೆ, ಇನ್ನೂ ಕೆಲವರು ಕರಕುಶಲ ಕಲೆಗಳನ್ನು ನಂಬಿ ಜೀವಿಸುತ್ತಿದ್ದಾರೆ. ಒಟ್ಟಿನಲ್ಲಿ ಸ್ವಾವಲಂಬಿಗಳಾಗಲು ಯತ್ನಿಸುತ್ತಿದ್ದಾರೆ.

ಕೆಲವರು ತಮ್ಮ ಸಮುದಾಯದ ಹೆಸರನ್ನು ಸಹ ಹೇಳಿಳಿಕೊಳ್ಳುವುದಿಲ್ಲ. ಬೇರೆ ಕೆಳ ಜಾತಿಗಳು ಪಡೆಯುವ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಿಲ್ಲ. ಇತ್ತೀಚಿನ ದಿನಗಳಲ್ಲಿ ಸಹ ಇವರು ಆರ್ಥಿಕವಾಗಿ ತುಂಬ ಹಿಂದುಳಿದಿದ್ದಾರೆ. ಆರ್ಥಿಕ, ಶೈಕ್ಷಣಿಕ, ರಾಜಕೀಯ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ತುಂಬ ಹಿಂದುಳಿದಿದ್ದಾರೆ. ಸರಕಾರದ ಯೋಜನೆಗಳನ್ನು ಇತರ ಪರಿಶಿಷ್ಟ ಜಾತಿ ಸಮುದಾಯಗಳು ಪಡೆದುಕೊಳ್ಳುವಂತೆ ಈ ಸಮುದಾಯ ಪಡೆದುಕೊಳ್ಳಲು ಆಗುತ್ತಿಲ್ಲ. ಸರಕಾರ ಇವರಿಗೋಸ್ಕರ ಯೋಜನೆಗಳನ್ನು ರೂಪಿಸಬೇಕು. ಅವು ಇವರು ಇರುವಲ್ಲಿಗೆ ತಲುಪುವಂತಾಗಬೇಕು. ಕತ್ತಲ ಲೋಕದಿಂದ ಇವರು ಹೊರ ಬರಬೇಕು. ಅಸಹಾಯಕತೆಗಳ ಮಧ್ಯದಲ್ಲಿ ಸಾಹಸ ದಿಟ್ಟತನಗಳಿಂದ ಬಾಳಿದ ಡೊಂಬರಲ್ಲಿ ಸ್ವಾಭಿಮಾನ, ಶೋಷಣೆ ಗೀಡಾಗದ ಪ್ರಜ್ಞೆ ತೊಲಗಿ ಅವರು ಸ್ವಾವಲಂಬಿಗಳಾಗಿ ತಲೆಯೆತ್ತಿ ಬಾಳುವಂತಾಗಬೇಕು.

## ಆ. ಡೊಂಬರ ಮಹಿಳೆಯ ಸ್ಥಾನಮಾನ

ಡೊಂಬರ ಸಮುದಾಯದ ಮಹಿಳೆ ಯಾವ ರೀತಿಯಲ್ಲಿ ಚಾರಿತ್ರಿಕವಾಗಿ ಬಾಳಿ ಬಂದಿದ್ದಾಳೆ ಎನ್ನುವುದಕ್ಕೆ ರತ್ನಾಜಿ ಮತ್ತು ಚನ್ನಮ್ಮ ಇವರ ಜೀವನಚರಿತ್ರೆಗಳು ಸಾಕ್ಷಿಯಾಗಿವೆ. ಈ ಸಮುದಾಯದ ಮಹಿಳೆಯರು ತುಂಬ ಸೌಂದರ್ಯವಂತರು. ಹಾಗೂ ಸಂಗೀತ, ನೃತ್ಯ ವಿವಿಧ ಕಲೆಗಳಲ್ಲಿ ವಿಶೇಷ ಪರಿಣಿತಿ ಹೊಂದಿದವರು. ಮೇಲ್ವರ್ಗದವರ ತುಳಿತಕ್ಕೆ ನಿರಂತರವಾಗಿ ಒಳಗಾದವರು. ಆದರೆ ನಿರಂತರ ಅಲೆಮಾರಿಗಳಾಗಿ ಒಂದೇ ಕಡೇ ನೆಲೆನಿಲ್ಲದೆ ಊರಿನಿಂದ ಊರಿಗೆ ಚಲಿಸುತ್ತ, ಅಸ್ಪೃಶ್ಯರಂತೆ ಬದುಕುತ್ತ

ಬಂದಿದ್ದಾರೆ. ಮಾತೃಪ್ರಧಾನ ಸಮುದಾಯವಾಗಿರುವುದರಿಂದ ಈ ಸಮುದಾಯದಲ್ಲಿ ಸ್ತ್ರೀ ಮಹತ್ವದ ಪಾತ್ರ ವಹಿಸುತ್ತಾಳೆ. ಇತರ ಸಮುದಾಯದ ಮಹಿಳೆಯರ ಸ್ಥಾನಮಾನಕ್ಕೂ ಈ ಸಮುದಾಯದ ಸ್ತ್ರೀಯರ ಬದುಕಿಗೂ ಹಲವು ಭಿನ್ನತೆಗಳಿವೆ.

### ೧. ಆರ್ಥಿಕ ಕ್ಷೇತ್ರದಲ್ಲಿನ ಸ್ಥಾನಮಾನ

ಡೊಂಬರ ಸಮುದಾಯ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ತುಂಬಾ ಹಿಂದುಳಿದಿದೆ. ಇವರಿಗೆ ಯಾವುದೇ ಒಂದು ನಿಶ್ಚಿತ ಆರ್ಥಿಕ ಮೂಲಗಳಿಲ್ಲ. ಭಾರತದ ಸಾಂಪ್ರದಾಯಶೀಲ ಉತ್ಪಾದನಾ ವ್ಯವಸ್ಥೆಯಲ್ಲಿ ಒಂದು ಸಮುದಾಯ ತನ್ನದೇ ಆದ ಪಾರಂಪರಿಕ ವೃತ್ತಿಯ ಜೊತೆ ಬೆಳೆದುಕೊಂಡು ಬರುತ್ತದೆ. ಸೀಮಿತ ಉತ್ಪಾದನೆ ಮತ್ತು ವಿತರಣೆಗೆ ಅನುಗುಣವಾಗಿ ತಮ್ಮ ಉತ್ಪಾದನಾ ಸಾಧನಗಳನ್ನು ರೂಪಿಸಿಕೊಂಡು ಬಂದ ಈ ಬಗೆಯ ಸಮುದಾಯಗಳು, ದಿಢೀರನೇ ಉತ್ಪಾದನಾ ಕ್ಷೇತ್ರದಲ್ಲಾಗುವ ಕ್ರಾಂತಿಕಾರಕ ಬದಲಾವಣೆಗೆ ಹೊಂದಿಕೊಳ್ಳಲಾಗುವುದಿಲ್ಲ. ಕೈಗಾರಿಕೀಕರಣದ ದಾಳಿಯಲ್ಲಿ ಭಾರತದ ಗುಡಿಕೈಗಾರಿಕೆಗಳು ನಾಶವಾದದ್ದು ಈ ಹಿನ್ನೆಲೆಯಲ್ಲಿಯೆ. ಡೊಂಬರು, ಆಧುನಿಕ ಸರ್ಕಸ್‌ಗಳ ಮುಂದೆ ಕೈಚೆಲ್ಲಿ ಕುಳಿತರು. ಬಂಡವಾಳ ಹಾಕಿ ಒಂದು ದೊಡ್ಡ ಸರ್ಕಸ್ ಕಂಪನಿಯನ್ನು ಕಟ್ಟುವಷ್ಟು ಸಾಂಘಿಕಶಕ್ತಿ ಮತ್ತು ಶ್ರೀಮಂತಿಕೆ ಎರಡೂ ಇರಲಿಲ್ಲ. ನಿಶ್ಚಿತ ಆದಾಯದ ಮೂಲವೇ ಇರಲಿಲ್ಲ. ಇದ್ದಕ್ಕಿದ್ದಂತೆ ಈ ಸಮುದಾಯ ಅಸಹಾಯಕವಾಗಿ ಕೈಚೆಲ್ಲಿ ಕುಳಿತುಬಿಟ್ಟಿತು. ಈ ಸಮುದಾಯಕ್ಕೆ ನಿಗಧಿತವಾದ ವೃತ್ತಿಯಿಲ್ಲ. ಇವರು ತಮ್ಮ ಕಲೆಯನ್ನು ವೃತ್ತಿಯಾಗಿಸಿಕೊಂಡವರು. ಪುರುಷ ಪ್ರಧಾನ ಸಮುದಾಯವಾದರು ಸ್ತ್ರೀಯರು ಕುಟುಂಬದ ಸಂಪೂರ್ಣ ಜವಾಬ್ದಾರಿಯನ್ನು ಹೊಂದಿರುತ್ತಾರೆ.

ಸಾಮಾಜಿಕ ಪರಿವರ್ತನೆಯಿಂದ ಡೊಂಬರು ಸಮುದಾಯವು ಗುಂಪು ಗುಂಪಾಗಿ ತಮಗೆ ಅನುಕೂಲವಾದ ಪ್ರದೇಶಗಳಲ್ಲಿ ನೆಲೆ ನಿಂತಿತು. ತಮ್ಮ ವೃತ್ತಿಯನ್ನು ಕೈಬಿಟ್ಟು ಇವರು ಅನೇಕ ವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಕೃಷಿ, ಪಶುಸಂಗೋಪನೆ, ಕರಕುಶಲ ಕಲೆಗಳಲ್ಲಿ ಸಹ ತೊಡಗಿಸಿಕೊಂಡಿದ್ದಾರೆ. ಕೆಲವು ಸ್ತ್ರೀಯರು ತಮ್ಮ ಮೂಲವೃತ್ತಿಯನ್ನು ಮೈಗೂಡಿಸಿಕೊಂಡು ರಂಗಭೂಮಿಯ ನಟಿಯರೂ ಆಗಿದ್ದಾರೆ. ಶಿಕ್ಷಣ ಪಡೆದುಕೊಂಡು ಉನ್ನತ ಉದ್ಯೋಗಗಳಲ್ಲಿ ಸರಕಾರಿ ಉದ್ಯೋಗಗಳಲ್ಲಿ ಸಹ ಇದ್ದಾರೆ. ಕೆಲವರು ಸ್ವಯಂ ಉದ್ಯೋಗಗಳಲ್ಲಿ ತೊಡಗಿದ್ದಾರೆ. ಕೆಲವರು ತುಂಬಾ ಕೆಳದರ್ಜೆಯ ಕೆಲಸಗಳನ್ನು ಮಾಡುತ್ತಿದ್ದಾರೆ. ಇನ್ನೂ ಕೆಲವರು ಕೂಲಿಕೆಲಸಗಳನ್ನು ಮಾಡುತ್ತಾರೆ. ಹೂ ಮಾರುವುದು, ತರಕಾರಿ ಮಾರುವುದು ಕೆಲವು ಸ್ತ್ರೀಯರು ಶ್ರೀಮಂತರ ಮನೆಯಲ್ಲಿ ಕೆಲಸ ಮಾಡಲು ಹೋಗುತ್ತಾರೆ. ಈ ಬಗೆಯ ಅಲೆಮಾರಿ ಸಮುದಾಯಗಳ ಕುಟುಂಬಗಳಲ್ಲಿ ಸಹಜವಾಗಿಯೇ ಮಹಿಳೆ ಎಲ್ಲ

ಜವಾಬ್ದಾರಿಗಳನ್ನು ಹೊತ್ತಿರುತ್ತಾಳೆ. ಆರ್ಥಿಕವಾಗಿ ಮುಂದುವರಿದ ಕುಟುಂಬಗಳಲ್ಲಿ ಗಂಡಸರು ಮೇಲುಗೈ ಸಾಧಿಸಿದ್ದಾರೆ. ಇನ್ನೂ ಅಲೆಮಾರಿಗಳಾಗಿ, ಆರ್ಥಿಕವಾಗಿ ಕುಟುಂಬದ ಬಹುತೇಕ ಆದಾಯ ಇವರಿಂದಲೇ ಹರಿದುಬರುತ್ತದೆ. ಗಂಡಸು ಈವತ್ತಿನ ವೇಗದ ಸ್ಪರ್ಧೆಯಿಂದ ದಿಕ್ಕೆಟ್ಟು ಹೋಗಿ ಅಸಾಯಕನಾದಾಗ ಇಡೀ ಕುಟುಂಬವನ್ನು ಮಹಿಳೆಯೇ ಮುನ್ನೆಡೆಸುತ್ತಾಲೆ. ಇದು ಬಹುತೇಕ ಎಲ್ಲ ಅಲೆಮರಿಗಳಾಗಿ ಅನ್ವಯಿಸುವ ಅಂಶವಾಗಿದೆ. ಇವರಿಗೆ ವಾಸಿಸಲು ಮನೆಯಿಲ್ಲ, ದುಡಿಯಲು ಭೂಮಿಯಿಲ್ಲ, ಈ ಸಮುದಾಯದ ಆರ್ಥಿಕಾಸ್ಥಿತಿ ಚಿಂತಾಜನಕವಾಗಿದೆ.

೨. ಸಾಮಾಜಿಕ ಸ್ಥಾನಮಾನ

ಡೊಂಬರ ಸಮುದಾಯದ ಮಹಿಳೆಯರು ತುಂಬಾ ಸುಂದರವಾಗಿರುತ್ತಾರೆ. ಇವರು ಸಂಗೀತ, ನೃತ್ಯದಲ್ಲಿ ವಿಶೇಷ ಪರಿಣಿತಿ ಪಡೆದ ಇವರನ್ನು ಮೇಲ್ವರ್ಗದವರು ಕಾಮುಕ ದೃಷ್ಟಿಗೆ ಸಿಲುಕಿ ಭೋಗದ ವಸ್ತುವನ್ನಾಗಿ ಬಳಸಿಕೊಂಡಿದ್ದಾರೆ. ಈ ಕಾರಣಕ್ಕಾಗಿ ಕೆಲವರು ಅನಿವಾರ್ಯವಾಗಿ ವೇಶ್ಯಾವೃತ್ತಿಗೆ ಇಳಿದಿರಬಹುದು.

ಪ್ರಾಚೀನ ಕಾಲದಲ್ಲಿ ಡೊಂಬರ ಹುಡುಗಿಯರು ಡೊಂಬರಾಟದ ಪ್ರದರ್ಶನ ನೀಡುತ್ತಿದ್ದುದರಿಂದ ಇವರಿಗೆ ವಿವಾಹವಾಗುವುದು ತುಂಬಾ ಕಷ್ಟವಾಗಿತ್ತು. ಹೀಗಾಗಿ ಇವರನ್ನು ಅನಿವಾರ್ಯವಾಗಿ ಯಲ್ಲಮ್ಮ ದೇವರ ಹಾಗೂ ಓಕುಳಿ ಪದ್ಧತಿಯಲ್ಲಿ ದೇವದಾಸಿಯರನ್ನಾಗಿ ಮಾಡಿ ಬಿಡುತ್ತಿದ್ದರು. ದೇವರಿಗೆ ಬಿಡುವುದು, ಮನೆಯಲ್ಲಿ ಬಿಡುವುದು ಈ ಪದ್ಧತಿಗಳು ಈ ಸಮುದಾಯದಲ್ಲಿ ಹೆಚ್ಚಾಗಿ ಕಂಡುಬರುತ್ತಿದ್ದವು.

ಧಾರ್ಮಿಕ ತಳಹದಿಯಲ್ಲಿ ದೇವದಾಸಿಯರನ್ನು ಹುಟ್ಟುಹಾಕುವ ಆಚರಣೆಯನ್ನು ಇಲ್ಲಿ ಕಾಣಬಹುದಾಗಿದೆ. "ಯಲ್ಲಮ್ಮ ದೇವತೆಯ ಸೇವೆಗೆ ಮಹಿಳೆಯರು ಮತ್ತು ಪುರುಷರು ತಮ್ಮನ್ನು ತಾವೇ ಅರ್ಪಿಸಿಕೊಳ್ಳುತ್ತಾರೆ. ಹಾಗೆ ಅರ್ಪಿಸಿಕೊಂಡ ಮಹಿಳೆಯರನ್ನು ಜೋಗತಿಯರು ಅಥವಾ ದೇವದಾಸಿಯರು ಎಂದು ಹೆಸರಿಸಿದರೆ ದೇವತೆಗೆ ಅರ್ಪಿಸಿಕೊಳ್ಳುವ ಪುರುಷರನ್ನು ಜೋಗಯ್ಯಗಳು ಎಂದು ಹೇಳುತ್ತಾರೆ."[೬] ಎಲ್ಲಮ್ಮ ದೇವತೆಯ ಹೆಸರಿನಲ್ಲಿ ಮುತ್ತು ಕಟ್ಟಿಸಿಕೊಂಡವರು ಹಾಗೂ ಜೋಗತಿಯರು ಯಾರನ್ನೂ ಮದುವೆಯಾಗುವಂತಿಲ್ಲ. ಇವರು ಮೇಲ್ವರ್ಗದ ಪುರುಷರ ಜೊತೆ ಕೂಡಿಕೊಳ್ಳುವುದಕ್ಕೆ ಸಮುದಾಯದ ಒಪ್ಪಿಗೆ ಇರುತ್ತಿತ್ತು. "ಪುರೋಹಿತಶಾಹಿತ್ವ ರಾಜಕೀಯ ಸ್ಥಿತಿಯಲ್ಲಿ ಭದ್ರವಾಗಿ ಬೇರುಬಿಟ್ಟು ನಿಂತಾಗ ಪುರೋಹಿತನೇ ದೇವಸ್ವರೂಪಿಯಾದನು. ದೇವರಿಗೆಂದು ಅರ್ಪಿಸುವ ವಸ್ತುಗಳೆಲ್ಲಾ ಆತನಿಗೇ ಸಲ್ಲಿಸಲ್ಪಟ್ಟವು. ಈ ಹೊತ್ತಿಗಾಗಲೇ ಹೆಣ್ಣನ್ನು ಕಾಮಪ್ರೇರಕ ವಸ್ತುವಾಗಿ ಪರಿಗಣಿಸಲ್ಪಟ್ಟಿತ್ತು. ತನ್ನ ಭೋಗಕ್ಕೆ ಅನುಕೂಲ

ವಾದ ಸ್ತ್ರೀಯರನ್ನು ತನ್ನ ಮನರಂಜನೆಗೆ ಕಾಮ ಉತ್ತೇಜನಕ್ಕೆ ಪೂರಕವಾಗುವಂತೆ ಧಾರ್ಮಿಕ ಚೌಕಟ್ಟಿನಲ್ಲಿ ಕುಣಿಸಿ ಅವಳನ್ನು ತಾನೆ ಉಪಭೋಗಿಸ ತೊಡಗಿದನು."[೭]

ಕೇವಲ ಮೇಲುಜಾತಿಯವರು ಮಾತ್ರ ಈ ಒಂದು ದೇವದಾಸಿ ಪದ್ಧತಿ ಹುಟ್ಟುಹಾಕುವುದಕ್ಕೆ ಕಾರಣವಾಗಲಿಲ್ಲ. ಈ ಸಮುದಾಯಗಳ ಸಹ ಕಾರಣವಾಗಿವೆ. ಮನೆಯಲ್ಲಿ ಬಿಡುವುದು ಅಂದರೆ ಒಂದು ಕುಟುಂಬದಲ್ಲಿ ಹೆಣ್ಣುಮಕ್ಕಳು ಇದ್ದು ಗಂಡು ಸಂತಾನವಿಲ್ಲದಿದ್ದರೆ, ಅಥವಾ ಒಂದೇ ಹೆಣ್ಣು ಇದ್ದರೆ ಕುಟುಂಬದ ಉತ್ತರಾಧಿಕಾರತ್ವಕ್ಕೋಸ್ಕರ ಒಬ್ಬ ಮಗಳನ್ನು ಮನೆಯಲ್ಲಿಯೇ ಬಿಡುತ್ತಿದ್ದರು. ಆದರೆ ಮುತ್ತು ಕಟ್ಟಿಸುತ್ತಿದ್ದರು. ಇಲ್ಲವಾದರೆ ಅವರ ಮನೆದೇವರ ಆಚರಣೆಯ ಪ್ರಕಾರ ದೇವರಿಗೆ ಬಿಡುತ್ತಾರೆ. ಇವಳು ಯಾರ ಜೊತೆಗಾದರೂ ಲೈಂಗಿಕ ಸಂಪರ್ಕ ಹೊಂದಬಹುದು. ಇವಳ ಸಂತಾನವನ್ನೇ ಮುಂದೆ ಕುಟುಂಬದ ಉತ್ತರಾಧಿಕಾರಿಯಾಗಿ ಪರಿಗಣಿಸಲಾಗುತ್ತದೆ.

ಸಮಾಜದಲ್ಲಿ ಮೊದಲು ದೇವದಾಸಿಯರು ಎಂದರೆ ತುಂಬ ಗೌರವ ಇರುತ್ತಿತ್ತು. ಹಾಗೂ ಮುತ್ತೈದೆಯರೆಂದೇ ಅವರನ್ನು ಪರಿಗಣಿಸುತ್ತಿದ್ದರು. ಇವರಿಗೆ ಮದುವೆ, ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಹೆಚ್ಚಿನ ಪ್ರಾಮುಖ್ಯತೆ ನೀಡುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ದೇವದಾಸಿಯರೆಂದರೆ ತುಚ್ಛವಾಗಿ ಕಾಣುತ್ತಾರೆ. ಅಷ್ಟೇ ಅಲ್ಲದೆ ಅವರ ಮಕ್ಕಳಿಗೂ ಸಹ ಸಮಾಜ ಕಡೆಗಣ್ಣಿನಿಂದ ನೋಡುತ್ತದೆ.

ಸಮಾಜದ ಈ ನೆಲೆಯಲ್ಲಿ ಶೋಷಣೆಗೆ ಒಳಪಟ್ಟ ಸಮುದಾಯಗಳೆಂದರೆ ಪಾತರದವರು, ಮತ್ತು ಡೊಂಬರು ಸಮುದಾಯಗಳೆಂದು ಹೇಳಬಹುದು. ಮತ್ತೆ ಇದೇ ರೀತಿ ಅನೇಕ ಕೆಳಜಾತಿ ಸಮುದಾಯಗಳು ಸ್ತ್ರೀಯರು ಸಾಮಾಜಿಕ ಅವಮಾನಕ್ಕೆ ಒಳಗಾಗಿದ್ದಾರೆ.

### ೩. ಸಾಂಸ್ಕೃತಿಕ ಸ್ಥಾನಮಾನ

ಡೊಂಬರ ಸಮುದಾಯದಲ್ಲಿ ಸಂಸ್ಕೃತಿ ಕ್ಷೇತ್ರದಲ್ಲಿ ಮಹಿಳೆಯರಿಗೆ ಹೆಚ್ಚಿನ ಪ್ರಾಶಸ್ತ್ಯ. ಡೊಂಬರ ಸಮುದಾಯದಲ್ಲಿ ಎಲ್ಲಮ್ಮ ದೇವರು, ಸುಂಕಲಮ್ಮ, ಹನುಮಂತ ದೇವರ, ಡೊಳ್ಳುಪ್ರಸ್ಥ, ಈ ಆಚರಣೆಗಳಲ್ಲಿ ಕೇಂದ್ರಬಿಂದು ಸ್ತ್ರೀಯಾಗಿದ್ದಾಳೆ. ಎಲ್ಲಮ್ಮ ದೇವತೆಗೆ ಆತ್ಮಾರ್ಪಣೆ ಮಾಡುವರು ಅಥವಾ ದೀಕ್ಷೆ ತೆಗೆದುಕೊಳ್ಳುವವರು, ಜೋಗತಿ, ಜೋಗಪ್ಪ, ಆಗುವ ಮತ್ತು ಮುತ್ತು ಕಟ್ಟಿಸಿಕೊಳ್ಳುವ ಆಚರಣೆಗಳು ಮುಖ್ಯವಾದವು. ಇಲ್ಲೆಲ್ಲಾ ಸ್ತ್ರೀಯೇ ಕೇಂದ್ರಬಿಂದುವಾಗಿರುತ್ತಾಳೆ.

#### ೩.೧. ಯಲ್ಲಮ್ಮ ದೇವಿಯ ಆರಾಧನೆ

ಯಲ್ಲಮ್ಮ ದೇವತೆಯ ಆರಾಧನೆ ಹೆಚ್ಚು ಕೆಳಜಾತಿಗಳಲ್ಲಿ ಕಂಡುಬರುತ್ತದೆ. ಯಲ್ಲಮ್ಮ

ದೇವತಿಯರಿಗೆ ಆತ್ಮರ್ಪಣೆ ಅಥವಾ ದೀಕ್ಷೆ ತೆಗೆದುಕೊಳ್ಳುವುದು, ದೇವದಾಸಿಯರಾಗುವುದು ಮತ್ತು ಜೋಗತಿಯರಾಗುವುದು ಎಂದರೆ ಮುತ್ತು ಕಟ್ಟಿಸಿಕೊಳ್ಳಬಹುದು. ಯಲ್ಲಮ್ಮ ದೇವಿಗೆ ಅರ್ಪಿತರಾದವರು. ಇವರು ಯಲ್ಲಮ್ಮ ದೇವಿಯ ಪ್ರಚಾರಕರು. ನೃತ್ಯ, ಸಂಗೀತ, ಲಲಿತಕಲೆಗಳಲ್ಲಿ ಪ್ರವೀಣರಾಗಿ ಯಾವ ದೇವಾಲಯದಲ್ಲಾದರೂ ದೇವರ ಸೇವೆಗಾಗಿ ತಮ್ಮ ಜೀವನವನ್ನು ಮುಡುಪಿಟ್ಟವರು. ದೇವದಾಸಿಯರಿಗೆ ಮತ್ತು ಜೋಗತಿಯರಿಗೆ ವಿವಾಹವಾಗುವಂತಿಲ್ಲ. ಯಲ್ಲಮ್ಮನೇ ಇವರಿಗೆ ಗಂಡ ಆಗಿರುತ್ತಾಳೆ. ಇವರು ಪುರೋಹಿತರು ಮತ್ತು ಮೇಲ್ವರ್ಗದವರು ಅಥವಾ ತಮಗೆ ಇಷ್ಟ ಬಂದವರ ಜೊತೆ ಲೈಂಗಿಕ ಸಂಬಂಧ ಇಟ್ಟುಕೊಳ್ಳಬಹುದು. ಈ ಒಂದು ಪದ್ಧತಿ ಕೆಲವೊಮ್ಮೆ ಈ ಸಮುದಾಯದ ಮಹಿಳೆಯನ್ನು ವೇಶ್ಯಾವಾಟಿಕೆಗೂ ಇಳಿಸುತ್ತದೆ.

ಈ ಒಂದು ಪದ್ಧತಿ ಡೊಂಬರ ಸಮುದಾಯದಲ್ಲಿ ಕಂಡುಬರುತ್ತದೆ. ಮುತ್ತು ಕಟ್ಟಿಸಿಕೊಳ್ಳುವುದು ಪ್ರಚಲಿತದಲ್ಲಿ ಇಂದಿಗೂ ಇರುವುದು ಕಂಡುಬರುತ್ತದೆ. ಮೇಲ್ವರ್ಗದವರು ಕೆಳಜಾತಿಯ ಸ್ತ್ರೀಯರನ್ನು ತಮ್ಮ ಇಚ್ಛೆ ಬಂದಂತೆ ನಡೆಸಿಕೊಳ್ಳುತ್ತಾ ಬಂದಿದ್ದಾರೆ. ತಮ್ಮ ವಿಲಾಸಕ್ಕೆ ಅಂಗಭೋಗ, ರಂಗಭೋಗದ ಸೇವೆಗೆಂದೇ ಇಂತಹ ಸಮುದಾಯಗಳ ಹೆಣ್ಣುಗಳನ್ನು ಮೀಸಲು ಮಾಡಿದರು. ಅವರಿಗೆ ಅವರ ದೇವರ ಆರಾಧನೆಯಿಂದಲೇ ದೇವದಾಸಿ ಪದ್ಧತಿಯನ್ನು ಹುಟ್ಟುಹಾಕಿದರು. ಧಾರ್ಮಿಕತೆಯನ್ನು ಕಾಪಾಡಿಕೊಂಡು ಬರುವ ನಿಟ್ಟಿನಲ್ಲಿ ದೇವರು ಮತ್ತು ಧರ್ಮ ಎಂಬ ಹೆಸರಿನಲ್ಲಿ ಈ ಹೆಂಗಳೆಯರನ್ನು ಕತ್ತಲಲೋಕಕ್ಕೆ ತಳಿದರು. ಡೊಂಬರ ಸಮುದಾಯದ ಮಹಿಳೆಯರು ಸಹ ಈ ಸ್ತ್ರೀ ದೇವತೆಯ ಹೆಸರಿನಲ್ಲಿ ಮುತ್ತು ಕಟ್ಟಿಸಿಕೊಂಡು ಯಾರದೋ ಪಿಪಾಸೆಗಳಿಗೆ ಬಲಿಯಾಗಿದ್ದಾರೆ.

**೩.೨. ದೊಳ್ಳುಪ್ರಸ್ಥ**

ಶಿವಮೊಗ್ಗ ಜಿಲ್ಲೆಯ ಸುತ್ತಮುತ್ತಲು ಇರುವ ಡೊಂಬರೆಲ್ಲರೂ ಒಂದೇ ಸಂತತಿಗೆ ಸೇರಿದವರು. “ಐತಿಹಾಸಿಕ ವ್ಯಕ್ತಿ ಕುಮಾರರಾಮನನ್ನು ಡೊಂಬರ ತಮ್ಮ ವಂಶದ ಮಗ ಎನ್ನುತ್ತಾರೆ. ರಾಣಿ ಚೆನ್ನಮ್ಮಾಜಿ ಕುಮಾರರಾಮನಿಂದ ರತ್ನಾಜಿಗೆ ಬಂದ ಶಾಪದಿಂದಾಗಿ ತಾವು ತಮ್ಮ ಹೆಣ್ಣುಗಳನ್ನು ದೊಳ್ಳಿಗೆ ದಾರೆ ಎರೆದು, ದೇವರ ಮುಂದೆ ಕುಣಿಸಬೇಕಾಗಿದೆ ಎನ್ನುತ್ತಾರೆ. ರತ್ನಾಜಿಗೆ ಬಂದಾಗ ಶಾಪ ತಮ್ಮ ಕುಲಕ್ಕೆ ಬಂದ ಶಾಪ ಎನ್ನುತ್ತಾರೆ ಡೊಂಬರು”[೮] ದೊಳ್ಳು ಪ್ರಸ್ಥ ಸಹ ಮದುವೆಯ ಕಾರ್ಯಕ್ರಮದಂತೆಯೇ ನಡೆಯುತ್ತದೆ. ಈ ಆಚರಣೆ ಮದುವೆಯ ವಿಧಿವಿಧಾನವನ್ನು ಯಥಾವತ್ತು ಅನುಕರಿಸುತ್ತದೆ. ಗಂಡಿನ ಸ್ಥಳವನ್ನು ಮಾತ್ರ ದೊಳ್ಳು ಅಲಂಕರಿಸುತ್ತದೆ. ಹೆಣ್ಣನ್ನು ಮಧ್ಯದಲ್ಲಿ ಕೂರಿಸಿ ಎಡಬಲದಲ್ಲಿ ಕ್ರಮವಾಗಿ

ಡೊಳ್ಳು ಮೃದಂಗವನ್ನೇ ಇಡುತ್ತಾರೆ. ಡೊಳ್ಳಿಗೆ ಗಂಡಿನ ಮದುವೆ ಪೇಟೆ ಧರಿಸುತ್ತಾರೆ. ಮಂತ್ರಾಕ್ಷತೆಯ ಮಧ್ಯೆ ಹಿರಿಯರು ತಾಳಿಯನ್ನು ಕಟ್ಟುತ್ತಾರೆ."[೯] ಅಂದಿನಿಂದ ಅವಳು ವೇಶ್ಯೆಯಾದಂತೆ ಡೊಳ್ಳಿಗೆ ಧಾರೆ ಎರೆದ ಸ್ತ್ರೀಯರು ತಮ್ಮ ಊರಲ್ಲಿ ಯಾರಾದರೂ ಪ್ರತಿಷ್ಠಿತ ವ್ಯಕ್ತಿ ಅಥವಾ ಮೇಲ್ವರ್ಗದವರ ಜೊತೆ ದೈಹಿಕ ಸಂಬಂಧ ಹೊಂದಬಹುದು. ಈ ಹಂತದಲ್ಲಿ ಡೊಂಬರು ಮತ್ತು ಪಾತರದವರ ಸಂಸ್ಕೃತಿ ಒಂದೇ ಆಗಿದೆ ಎಂದು ಹೇಳಬಹುದು. ಪಾತರದವರು ಸ್ತ್ರೀಯರನ್ನು ತಬಲಕ್ಕೆ ಧಾರೆ ಎರೆದುಕೊಟ್ಟರೆ, ಡೊಂಬರು ಡೊಳ್ಳಿಗೆ ಧಾರೆ ಎರೆದು ಕೊಡುತ್ತಾರೆ. ಮಲೆನಾಡಿನ ಪ್ರದೇಶಗಳ ಕಡೆ ಕುಮಾರರಾಮನನ್ನು ಗ್ರಾಮದೇವತೆ ಎಂದು ಪೂಜೆ ಮಾಡುತ್ತಾರೆ.

ಗ್ರಾಮದೇವತೆಗೆ ವರ್ಷಕ್ಕೊಮ್ಮೆ ಉತ್ಸವ, ಹಬ್ಬ ಮಾಡುತ್ತಾರೆ. ಈ ಹಬ್ಬ, ಉತ್ಸವಗಳಲ್ಲಿ ಡೊಂಬರಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಲಾಗುತ್ತದೆ. ಈ ಸಂದರ್ಭದಲ್ಲಿ ದೇವರು ಗಣಪತಿಯ ಮೇಲೆ ಬರುತ್ತದೆ. ದೇವರು ಮೈದುಂಬಿ ಬರುವಂತೆ ಕುಣಿಸುವ ಕೆಲಸ ಡೊಂಬರ ನಾಯಕನದಾಗಿರುತ್ತದೆ. ದೇವರು ಸುತ್ತಸುತ್ತಾ ಪಹರೆಯಲ್ಲಿ ಬರುವಂತೆ ಡೊಳ್ಳಿನ ನಾದದಿಂದ ದೇವರಿಗೆ ಸಂಗೀತ, ನೃತ್ಯದಿಂದ ಡೊಂಬತಿಯರು ತೃಪ್ತಿ ಮಾಡಬೇಕು.

### ೩.೩. ಹನುಮಂತ ದೇವರ ಮತ್ತು ಓಕುಳಿ ಆಚರಣೆ

ಹನುಮಂತ ದೇವರ ಜಾತ್ರೆಯಲ್ಲಿ ಮೇಲ್ಜಾತಿಗಳು ತಮ್ಮ ಮನೋರಂಜನೆಗೋಸ್ಕರ ಹುಟ್ಟುಹಾಕಿದ ಓಕುಳಿ ಆಚರಣೆಯನ್ನು ಉತ್ತರ ಕರ್ನಾಟಕದ ಎಲ್ಲೆಡೆ ನಾವು ನೋಡಬಹುದು. ಹನುಮಂತ ದೇವರ ರಥೋತ್ಸವದ ನಂತರ ಮೇಲ್ಜಾತಿಯ ಪುರುಷರು ಅರಿಷಿಣದ ನೀರು ಸಿದ್ಧಪಡಿಸುತ್ತಾರೆ. ಈ ನೀರನ್ನು ಕೆಳಜಾತಿ ಹೆಣ್ಣು ಮಕ್ಕಳಿಗೆ ಮತ್ತು ದೇವದಾಸಿಯರಿಗೆ ಎರಚುತ್ತಾರೆ. ಎರಚಿಸಿಕೊಂಡ ಸ್ತ್ರೀಯರು ಆ ದಿನ ರಾತ್ರಿ ಮೇಲ್ವರ್ಗದ ಪುರುಷನ ಜೊತೆ ಇರಬೇಕು. ನಂತರ ಅವಳು ಇಷ್ಟಪಟ್ಟವರ ಜೊತೆ ಇರಬಹುದು. ಇದು ಸಹ ದೇವದಾಸಿಯರನ್ನು ಹುಟ್ಟುಹಾಕುವ ಒಂದು ಆಚರಣೆಯಾಗಿದೆ.

"ಮೇಲ್ವರ್ಗದವರು ಸಾಮಾಜಿಕ ಧಾರ್ಮಿಕ ಹಾಗೂ ಸಾಂಸ್ಕೃತಿಕ ಅಂತರವನ್ನು ಬಹು ಎಚ್ಚರಿಕೆಯಿಂದ ಕಾಯ್ದುಕೊಂಡು ಬಂದರು. ಧಾರ್ಮಿಕತೆಯ ಹೆಸರಲ್ಲಿ ಈ ಕೆಳವರ್ಗದ ಮಹಿಳೆಯನ್ನು ಭೋಗದ ವಸ್ತುವನ್ನಾಗಿಯೇ ಪರಿಗಣಿಸಿದರು. ಹೀಗಿದ್ದೂ ಚರಿತ್ರೆಯ ಉದ್ದಕ್ಕೂ ಮಹಿಳೆ ಧರ್ಮ ಬಹಿಷ್ಕೃತಳಾಗಿ ಉಳಿದುಕೊಂಡು ಬಂದದ್ದೊಂದು ವಿಪರ್ಯಾಸ."[೧೦]

## ೩. ವರ್ತಮಾನದಲ್ಲಿ ಡೊಂಬರ ಮಹಿಳೆ

ವರ್ತಮಾನದಲ್ಲಿ ಡೊಂಬರ ಸಮುದಾಯದ ಮಹಿಳೆಯರು ಬದಲಾದ ಸಮಾಜಕ್ಕೆ ಹೊಂದಿಕೊಂಡಿದ್ದಾರೆ. ಶಿಕ್ಷಣ ಪಡೆದು ಅಕ್ಷರಸ್ಥರಾಗಿದ್ದಾರೆ. ಪದವಿಗಳನ್ನು ಪಡೆದುಕೊಂಡು ವಿಶ್ವವಿದ್ಯಾಲಯಗಳಲ್ಲಿ ಅಧ್ಯಯನ ಮಾಡುತ್ತಿದ್ದಾರೆ, ಕೆಲವರು ಸರಕಾರಿ ಉದ್ಯೋಗಗಳನ್ನು ಪಡೆದುಕೊಂಡಿದ್ದಾರೆ. ಆದರೆ ಈ ಸಮುದಾಯದಲ್ಲಿ ಅಕ್ಷರಸ್ಥರು ಮತ್ತು ಉದ್ಯೋಗಸ್ಥ ಸ್ತ್ರೀಯರು ಕೇವಲ ಬೆರಳಣಿಕೆಯಷ್ಟು ಮಾತ್ರ ಕಂಡುಬರುತ್ತಾರೆ.

೨೧ನೇ ಶತಮಾನದಲ್ಲಿ ಸಹ ಈ ಸಮುದಾಯದ ಸ್ತ್ರೀಯ ಸು. ೮೦ರಷ್ಟು ಅನಕ್ಷರಸ್ಥರಿರುವುದು ಕಂಡುಬರುತ್ತದೆ. ಆರ್ಥಿಕಸ್ಥಿತಿ ತುಂಬ ಕೆಳಮಟ್ಟದಲ್ಲಿ ಇರುವುದರಿಂದ ಇವರು ಶಿಕ್ಷಣ ಪಡೆಯಲಾಗುತ್ತಿಲ್ಲ.

■■

### ಟಿಪ್ಪಣಿಗಳು

೧. ಡೊಂಬರು ಒಂದು ಅಧ್ಯಯನ, ಡಾ.ಎಚ್.ಎಂ.ಮಹೇಶ್ವರಯ್ಯ, ಡಾ. ಎ. ಮುರಿಗೆಪ್ಪ, ಪು.೩೨

೨. ಡೊಂಬರ ಸಂಸ್ಕೃತಿ, ದೆ.ಸಿ. ಹಕಾರಿ, ಪು.೧೯

೩. ಅದೇ....ಪು.೧೯

೪. ಅದೇ....ಪು.೨೦

೫. ಮಾಹಿತಿದಾರರು ಡಿ. ಭರಮಣ್ಣ

೬. ದೇವದಾಸಿ ಸಂಪ್ರದಾಯ, ಡಾ. ಜೋಗನ್ ಶಂಕರ್, ಪು.೧೦೨

೭. ಪಾತರದವರು, ಶೈಲಜಾ ಹಿರೇಮಠ, ಪು.೨೬

೮. ಡೊಂಬರು ಒಂದು ಅಧ್ಯಯನ, ಡಾ.ಎಚ್.ಎಂ. ಮಹೇಶ್ವರಯ್ಯ, ಡಾ. ಎ. ಮುರಿಗೆಪ್ಪ, ಪು.೭

೯. ಅದೇ....ಪು.೪

೧೦. ಪಾತರದವರು, ಶೈಲಜಾ ಹಿರೇಮಠ, ಪು.೭೨

ಅಧ್ಯಾಯ ೩

# ಡೊಂಬರ ಸಮುದಾಯ ಮತ್ತು ರಂಗ ಪರಂಪರೆ

**ಕ**ರ್ನಾಟಕದಲ್ಲಿ ರಂಗಭೂಮಿಯನ್ನು ಪ್ರವೇಶಿಸಿದ ಮೊದಲ ಹೆಣ್ಣುಮಗಳು ಡೊಂಬರ ಸಮುದಾಯಕ್ಕೆ ಸೇರಿದವಳು. ಡೊಂಬರು ಎಂಬ ಹೆಸರೇ ಸೂಚಿಸುವ ಹಾಗೆ "ಗಣೆಯ ಮೇಲೆ ಲಾಗ ಹಾಕಿ ಕಸರತ್ತುಗಳನ್ನು ತೋರಿಸುತ್ತ ಜೀವನವನ್ನು ನೆಡೆಸುವವರು" ಎಂದು ಸುಲಭವಾಗಿ ಅರ್ಥಮಾಡಿಕೊಳ್ಳ ಬಹುದು. ಡೊಂಬರ ಈ ಸಮುದಾಯ ಪ್ರದರ್ಶನ ಕಲೆಗಳನ್ನು ನಂಬಿಕೊಂಡು ಬಂದ ಸಮುದಾಯವಾಗಿದೆ.

ರಂಗಭೂಮಿಗೂ ಮತ್ತು ಡೊಂಬರ ಸಮುದಾಯಕ್ಕೂ ನಿಕಟವಾದ ಸಂಬಂಧ ಇದೆ. ಪ್ರಾಚೀನ ಕಾಲದಿಂದಲೂ ಕೆಳಜಾತಿ ಸಮುದಾಯಗಳೇ ರಂಗ ಪರಂಪರೆಯನ್ನು ಬೆಳೆಸಿಕೊಂಡು ಬಂದಿರುವುದನ್ನು ನಾವು ನೋಡಬಹುದು. ಮೇಲ್ವರ್ಗದವರು ತಮ್ಮ ಮನರಂಜನೆಗೆಂದೇ ಅಂಗಭೋಗ ರಂಗಭೋಗದಂತಹ ಸೇವೆಗಳನ್ನು ಮಾಡುವುದಕ್ಕಾಗಿಯೇ ಕೆಲವು ಸಮುದಾಯಗಳನ್ನು ಗೊತ್ತು ಮಾಡಿಕೊಂಡಿದ್ದರು. ಪಾತ್ರದವರು, ಡೊಂಬರು. ಜಾತಿಗಾರರು, ಬೇಡರು, ಮಾದಿಗರು ಮತ್ತು ಕೆಳಜಾತಿಯ ಸಮುದಾಯಗಳು ಆಳುವ ವರ್ಗದ ರಂಜನೆಗೆ ತಮ್ಮನ್ನು ತಾವು ಪಾರಂಪರಿಕವಾಗಿ ತೊಡಗಿಸಿಕೊಡಿವೆ. ಒಂದು ಸಮುದಾಯದವರು ಅಭಿನಯಿಸುವುದು, ಹಾಡುವುದು, ನೃತ್ಯ ಮಾಡುವುದು, ಮತ್ತೊಂದು ಸಮುದಾಯದವರು ಸಂಗೀತ ವಾದ್ಯಗಳನ್ನು ನುಡಿಸುವುದು, ಹೀಗೆ ಸಾಮಾಜಿಕ ವ್ಯವಸ್ಥೆಯಲ್ಲಿ ಒಂದೊಂದು ಸಮುದಾಯ ರಂಗಭೂಮಿಯ ಕಾರ್ಯನಿರ್ವಹಿಸುತ್ತಾ ಬಂದಿರುವುದುನ್ನು ನೋಡಬಹುದು.

ಡೊಂಬರ ಸಮುದಾಯಕ್ಕೂ ಮತ್ತು ರಂಗಭೂಮಿಗೂ ನಿಕಟ ಸಂಬಂಧವಿದೆ. ಈ ಸಮುದಾಯ ಪ್ರದರ್ಶಕ ಕಲೆಗಳ ಜೊತೆಯಲ್ಲಿ ಬೆಳೆದುಕೊಂಡು ಬಂದಿದೆ. ಅಲೆಮಾರಿಗಳಾದ ಇವರು ಊರಿನಿಂದ ಊರಿಗೆ ತಮ್ಮ ಕಲೆಯನ್ನು ಪ್ರದರ್ಶನ ನೀಡುತ್ತಾ, ಜೀವನ ಸಾಗಿಸುತ್ತ ಬಂದಿದ್ದಾರೆ. ರಂಗಭೂಮಿ ಎಂದರೆ ರಂಗಮಂದಿರ ಆಗಬೇಕಾಗಿಲ್ಲ, ಬೀದಿಗಳಲ್ಲಿ ತಾತ್ಕಾಲಿಕ ರಂಗವನ್ನು ಸೃಷ್ಟಿ ಮಾಡಿಕೊಂಡು,

ನಿಂತಸ್ಥಳವನ್ನೇ ತಮ್ಮ ರಂಗಭೂಮಿಯನ್ನಾಗಿ ಮಾಡಿಕೊಂಡು ಡೊಂಬರು ತಮ್ಮ ಕಲೆಯನ್ನು ಪ್ರದರ್ಶಿಸುತ್ತಾರೆ. “ಕ್ರಿ.ಶ. ಸುಮಾರು ೧೧೪ರಲ್ಲಿ ಕಾಶ್ಮೀರದ ಕವಿ ಕಲ್ಹಣ ತನ್ನ ಕೃತಿ ರಾಜತರಂಗಿಣಿಯಲ್ಲಿ ಡೊಂಬರ ಒಂದು ಕಲಾತ್ಮಕ ತಂಡದ ವರ್ಣನೆ ಮಾಡುತ್ತಾನೆ. ೯೨೩-೯೩೭ರ ಅವಧಿಯಲ್ಲಿ ಕಾಶ್ಮೀರ ಅರಸನಾಗಿದ್ದ ಚಕ್ರವರ್ಮನ ಆಸ್ಥಾನಕ್ಕೆ ಖ್ಯಾತ ಕಲಾವಿದನಾದ ಡೊಂಬರ ರಂಗ ಎಂಬವನು ಅನ್ಯ ದೇಶದಿಂದ ಬಂದನಂತೆ. ರಂಗನ ಸಂಗಡ ಅವನ ಇಬ್ಬರು ಮಕ್ಕಳಾದ ಹಂಸಿ, ನಾಗಲತಾ ಚಕ್ರವರ್ಮನ ಸಭಾಗೃಹದ ರಂಗಮಂಟಪದಲ್ಲಿ ಸಂಗೀತ, ನೃತ್ಯ, ಕಲೆಪ್ರದರ್ಶನಕ್ಕೆ ಅನುಮತಿ ಪಡೆದು ಪ್ರವೇಶಿಸಿದ ಈ ತಂಡ, ಅನ್ಯಪ್ರದೇಶದಿಂದ ಬಂದುದಾಗಿತ್ತು ಎಂದು ಕವಿ ವರ್ಣಿಸಿದ್ದಾನೆ. ಹಂಸಿ, ನಾಗಲತ ಎಂಬ ಡೊಂಬತಿಯರಿಬ್ಬರು ಚಿತ್ತಾಕರ್ಷಕ ರೂಪವುಶ್ಮವರು ಬೆಡಗಿನ ಭಾವಾಭಿನಯ ಚೆಂಚಲ ಕಂಗಳ ಹೊಳಪುಗಳಿಂದ ಪ್ರಭಾವಿತನಾದ ಚಕ್ರವರ್ಮನಿಗೆ ಇವರ ಹಾಡು ರತ್ನಖಚಿತ ಹೂಜಿಯಲ್ಲಿ ಹಾಕಿದ ಮದಿರೆಯಷ್ಟು ಮಾದಕವಾಗಿತ್ತು. ಡೊಂಬತಿಯರ ಮೇಲಿನ ಚಕ್ರವರ್ಮನ ವ್ಯಾಮೋಹದಿಂದ ಹಂಸಿಯನ್ನು ಪಟ್ಟದ ಮಹಿಷಿಯಾಗಿ ಸ್ವೀಕರಿಸಿದನು. ಅಂದಿನಿಂದ ಆ ರಾಜ್ಯದಲ್ಲಿ ಡೊಂಬರ ಜನಾಂಗಕ್ಕೆ ಒಂದು ವಿಶೇಷ ಸ್ಥಾನಮಾನ ಲಭ್ಯವಾಯಿತು. ಸೋಮೇಶ್ವರ ಶತಕದ ‘ರಂಭಾನೃತ್ಯಕೇಂ ಡೊಂಬರೇ’ ಎನ್ನುವ ಮಾತು ಅರ್ಥಪೂರ್ಣ. ಡೊಂಬರು ವಿಶೇಷಿತಃ ಮಹಿಳೆಯರು ತುಂಬ ಚಲುವೆಯರು ಮತ್ತು ಸಂಗೀತ ನೃತ್ಯ ಕಲೆಗಳಲ್ಲಿ ಪಾರಂಗತರಾಗಿದ್ದರು. ಅವರನ್ನು ಅವರ ನರ್ತನ ಸಂಗೀತವನ್ನು ರಂಭಾ ಊರ್ವಶಿ ಇತ್ಯಾದಿ ಅಪ್ಸರೆಯರ ಸೌಂದರ್ಯ ಮತ್ತು ನೃತ್ಯ ವಿಶೇಷಗಳಿಗೆ ಹೋಲಿಸಲಾಗುತ್ತಿತ್ತು.”[೧]

ಡೊಂಬರು ಪ್ರಾಚೀನ ಕಾಲದಿಂದಲೂ ಅಲೆಮಾರಿಗಳು. ಇವರ ಗಂಡುಹೆಣ್ಣುಗಳ ತಂಡ ತಂಡವಾಗಿಯೇ ಚಲಿಸುತ್ತ ಬಂದು ಬದಲಾದ ಸಾಮಾಜಿಕ ವ್ಯವಸ್ಥೆಗೆ ಹೊಂದಿಕೊಳ್ಳಲು, ಅವರು ತಮಗೆ ಅನುಕೂಲವಾದ ಪ್ರದೇಶಗಳಲ್ಲಿ ನೆಲೆನಿಂತರು. ಆದರೆ ಮೇಲ್ವರ್ಗದಂತಿರುವ ಇವರನ್ನು ಅಸ್ಪೃಶ್ಯರು ಎಂದು ಊರುಗಳಿಂದ ಹೊರಗೇ ಇಟ್ಟರು. ತಮ್ಮ ಮೂಲ ವೃತ್ತಿಯನ್ನು ಕೈಬಿಟ್ಟು ಅನೇಕ ವೃತ್ತಿಗಳಲ್ಲಿ ತೊಡಗಿಸಿಕೊಂಡರು. ಇಂಥಹದೇ ಇವರ ವೃತ್ತಿ ಎಂದು ಗುರುತಿಸುವುದಕ್ಕೆ ಇಂದು ಸಾಧ್ಯವಿಲ್ಲ. ಕೆಲವರು ತಮ್ಮ ವೃತ್ತಿಯನ್ನು ಮೈಗೂಡಿಸಿಕೊಂಡು ರಂಗಭೂಮಿಗೆ ಪ್ರವೇಶ ಮಾಡಿ ಕಲಾವಿದೆಯರಾದರು. ಹೀಗೆ ರಾಜಶಾಹಿಯ ಕಾಲಘಟ್ಟದಲ್ಲಿ ಡೊಂಬರ ಹೆಣ್ಣುಗಳು ತಮ್ಮ ನೃತ್ಯದ ಪ್ರದರ್ಶನಗಳಿಂದ ಎಲ್ಲರ ಗಮನ ಸೆಳೆಯುತ್ತಿದ್ದರು. ಜೊತೆಗೆ ರಾಜನ ಅಂತರಂಗದ ಬದುಕನ್ನು ಪ್ರವೇಶಿಸಿ ಬಿಡುತ್ತಿದ್ದರು. ಕೃಷ್ಣದೇವರಾಯ ಮೋಹಿಸಿ ಮದುವೆಯಾದ ಚಿನ್ನಾದೇವಿ ಡೊಂಬರ ಸಮುದಾಯಕ್ಕೆ ಸೇರಿದವಳು. ಹೀಗಾಗಿ ಈ ಸಮುದಾಯದ ಹೆಣ್ಣುಮಕ್ಕಳು ಪ್ರದರ್ಶಕ ಕಲೆಯ ವಿಷಯದಲ್ಲಿ ಪಾರಂಪರಿಕವಾಗಿಯೇ ಪರಿಣತಿ ಪಡೆದವರು. ಅಲ್ಲದೆ ಡೊಂಬರಾಟ ಇವರ ಜೀವನೋಪಾಯದ ಪ್ರಮುಖ ಮಾರ್ಗ. ತಮ್ಮಲ್ಲಿನ ಸೃಜನಶೀಲ ಕಲೆಗಳನ್ನು

ಪ್ರದರ್ಶಿಸಿಯೇ, ಈ ಸಮುದಾಯ ಬದುಕಬೇಕಾದ ಚಾರಿತ್ರಿಕ ಅನಿವಾರ್ಯತೆ ಯಾವತ್ತೊ ಸೃಷ್ಟಿಯಾಗಿದೆ. ಈವತ್ತು ಆಧುನಿಕ ಜಗತ್ತಿನಲ್ಲಿ ಸರ್ಕಸ್ ಕಂಪನಿಗಳಿಂದಾಗಿ ಡೊಂಬರಾಟ ನಶಿಸಿಹೋಗಿದ್ದರೂ ಸಹ ಡೊಂಬರು ಮೂರ್ತಿಕೆತ್ತನೆ, ಬುಟ್ಟಿ ಹೆಣೆಯುವ, ಸಂಗೀತದಂತಹ ಸೃಜನಶೀಲ ರಂಗಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದೇ ಇದಕ್ಕೆ ಸಾಕ್ಷಿ.

ವ್ಯವಸ್ಥಿತ ರಂಗವೇದಿಕೆ, ರಚಿಸಲು, ಸಂದೇಶ ನೀಡಲು ಮತ್ತು ಪಾತ್ರಗಳು ತಮ್ಮ ಉದ್ದೇಶಗಳನ್ನು ಅರಿತು ಅಭಿನಯಿಸಲು ಅವಕಾಶವಿರುವ ನಾಟಕ ಪ್ರದರ್ಶನಕ್ಕಿಂತ ಡೊಂಬರಾಟ ಹಲವು ವಿಧದಲ್ಲಿ ಭಿನ್ನ. ಇಲ್ಲಿ ಹೊಟ್ಟೆಪಾಡಿನ ಪ್ರಶ್ನೆಯೇ ಮಹತ್ವದ್ದು. ಈ ಅಧ್ಯಾಯದಲ್ಲಿ ಡೊಂಬರ ಪ್ರದರ್ಶಕ ಕಲೆಗಳಲ್ಲಿ ಮಹಿಳೆಯ ಪಾತ್ರ ಮತ್ತು ಇವರ ಆಚರಣೆಗಳಲ್ಲಿ ಸ್ತ್ರೀಯನ್ನು ನಿರ್ವಚಿಸುವ ಆಶಯಗಳು, ಮತ್ತು ರಂಗಭೂಮಿಯ ಜೊತೆ ಈ ಸಮುದಾಯದ ಸಹಜ ಸಂಬಂಧಗಳು ಕುರಿತು ಚರ್ಚಿಸಲಾಗುವುದು.

## ಅ. ಡೊಂಬರ ಪ್ರದರ್ಶನ ಕಲೆಗಳು

ಎಲ್ಲರಿಗೂ ಗೊತ್ತಿರುವಂತೆ ಡೊಂಬರು ಡೊಂಬರಾಟವನ್ನು ಪ್ರದರ್ಶಿಸಿಯೇ ಬದುಕುವವರು. ಡೊಂಬರಾಟವನ್ನು ನಾವು 'ಕಲೆ' ಎಂಬ ಪರಿಭಾಷೆಯಲ್ಲಿ ಕರೆಯುತ್ತೇವೆ. ಆದರೆ ಡೊಂಬರಿಗೆ ಡೊಂಬರಾಟ ಒಂದು ಹೊಟ್ಟೆಪಾಡು. ತಮ್ಮ ಆಟವನ್ನು ಪ್ರದರ್ಶಿಸಿಯೇ ಅವರು ಬದುಕಬೇಕು. ಡೊಂಬರು ಪ್ರದರ್ಶಿಸುವ ಡೊಂಬರಾಟಕ್ಕೆ ರಂಗಭೂಮಿ ಇರುವುದಿಲ್ಲ ಅಥವಾ ದೊಡ್ಡಾಟ ಬಯಲಾಟಗಳಿಗೆ ಕಟ್ಟುವಂತ ವೇದಿಕೆಯನ್ನು ಕಟ್ಟೆಯನ್ನು ಸಿದ್ಧಪಡಿಸುವುದಿಲ್ಲ. ತಾವು ನೆಲೆ ನಿಂತ ಸ್ಥಳ ಜನಸಂದಣಿಯರ ಬೀದಿಗಳ ಮಧ್ಯದಲ್ಲಿ ತಮ್ಮದೇ ಆದ ತಾತ್ಕಾಲಿಕ ರಂಗವನ್ನು ಸೃಷ್ಟಿಸಿಕೊಂಡು ತಮ್ಮ ಕಲಾಪ್ರದರ್ಶನ ನೀಡುತ್ತಾರೆ.

"ಡೊಂಬರ ಬದುಕಿನ ರೀತಿಯಲ್ಲಿ ತಮ್ಮ ವೃತ್ತಿ ಸಹಜವಾಗಿಯೇ ಅವರಲ್ಲಿ ಏಕ ಪ್ರಕಾರವಾಗಿ ಧೈರ್ಯ, ಸಾಹಸ ಪ್ರವೃತ್ತಿಗಳನ್ನು ಬೆಳೆಸಿದೆ. ಬೇಟೆಗಾರಿಕೆಯ ಕಾಲದಿಂದಲೇ ಅಲೆಮಾರಿಗಳಾಗಿ ಜೀವನ ಸಾಗಿಸುತ್ತಾ ಬಂದ ಸಮುದಾಯವಾಗಿದೆ. ಇತರ ಸಮುದಾಯಗಳ ದೈಹಿಕ ಶಕ್ತಿಸಾಧನೆಗಳು ಬೀದಿಗಳಲ್ಲಿ ಹಾಗೂ ನೆಲೆ ನಿಂತ ಊರುಗಳಲ್ಲಿ ಪ್ರದರ್ಶಿಸುವುದು, ತಾವು ಪ್ರದರ್ಶಿಸುವ ವಿವಿಧ ಅದ್ಭುತ ವಿಸ್ಮಯಕಾರಿ ಕಲೆಗಳ ಪ್ರದರ್ಶನಗಳಿಗೆ ಜನರಿಂದ ಧನ, ಧಾನ್ಯ ಮುಂತಾದ ಪ್ರತಿಫಲ ಪಡೆದುಕೊಂಡು ಮುಂದಕ್ಕೆ ತಮ್ಮ ಪ್ರಯಾಣ ಬೆಳೆಸುವರು. ಡೊಂಬರು ಸಾಧಿಸಿಕೊಂಡು ಪ್ರದರ್ಶಿಸುವ ದೈಹಿಕ ಕಸರತ್ತು ಅಂಗ ಸಾಧನೆಯನ್ನು ಆಧರಿಸಿದ 'ಮಲ್ಗಿ' ಜಟ್ಟಿ ಕುಶಲತೆ ಮುಂತಾದವುಗಳಲ್ಲಿ ಒಂದು ಶಿಸ್ತು ಕ್ರಮೋಕ್ತತೆ ಮತ್ತು ಕಲಾತ್ಮಕತೆ ಇರುವುದರಿಂದ ಇವರು ನೀಡುವ ಎಲ್ಲ ಬಗೆಯ ಪ್ರದರ್ಶನಗಳು ಒಟ್ಟಾರೆ ವೀರ

ಸಾಹಸ ಕಲೆಗಳು ಎಂದು ಕರೆಯಬಹುದು."[3] ಡೊಂಬರು ತಮ್ಮ ಕಲೆಯನ್ನು ವರ್ಷವಿಡೀ ಪ್ರದರ್ಶನ ಮಾಡುವುದಕ್ಕೆ ಆಗುವುದಿಲ್ಲ. ಮಳೆಗಾಲದಲ್ಲಿ ಮೂರು ತಿಂಗಳು ಒಂದು ಕಡೆ ನೆಲೆಸಬೇಕು. ಹಾಗೂ ಮಳೆಗಾಲದಲ್ಲಿ ಪ್ರದರ್ಶನ ನೀಡುವುದಕ್ಕೆ ಆಗುವುದಿಲ್ಲ. ಆ ದಿನಗಳಲ್ಲಿ ಬೇರೆ ವೃತ್ತಿಯನ್ನು ಅವಲಂಬಿಸ ಬೇಕು. ಕೂಲಿಕೆಲಸ ಮಾಡುವುದು ಸೋಮವಾರ ಮತ್ತು ಮಂಗಳವಾರ ಇಂತಹ ದಿನಗಳಲ್ಲಿ ರೈತರುಗಳೇ ಹೂಡುವ ವಾರದ ದಿನ ಮಧ್ಯಾಹ್ನ ಸಾಯಂಕಾಲ ಪ್ರದರ್ಶನಗಳು ಏರ್ಪಾಡು ಮಾಡುತ್ತಾರೆ. ಪ್ರದರ್ಶನ ನೀಡುವ ಮೊದಲು ಆ ಊರಿನ ಅಥವಾ ಗ್ರಾಮದ ಮುಖ್ಯಸ್ಥರಿಗೆ ವೀಳ್ಯವನ್ನು ಕೊಟ್ಟು ಅನುಮತಿ ಪಡೆದುಕೊಳ್ಳುವ ಒಂದು ಸಂಪ್ರದಾಯವಾಗಿದೆ.

ಪ್ರದರ್ಶನಕ್ಕೆ ಊರ ದೇವಾಲಯ, ಗುಡಿ, ಮಂದಿರ ವಿಸ್ತಾರವಾದ ಬಯಲು ಪ್ರದೇಶಗಳಲ್ಲಿ ತಮಗೆ ಪ್ರದರ್ಶನಕ್ಕೆ ಅನುಕೂಲವಾದ ರೀತಿಯಲ್ಲಿ ಸಲಕರಣೆಗಳನ್ನು ಜೋಡಿಸುತ್ತಾರೆ. ಅತಿ ಮುಖ್ಯವಾಗಿ ಗಣೆ ನೆಟ್ಟ ಆಯಕಟ್ಟಿನ ಕಡೆಗಳಲ್ಲಿ ಅಲ್ಲಲ್ಲಿ ಗೂಟ ಬಡಿದು, ದಪ್ಪನೆಯ ಉದ್ದುದ್ದದ ಹಗ್ಗಗಳಿಂದ ಕಟ್ಟಿ ಗಣೆ ಬಿಗಿ ಮಾಡುತ್ತಾರೆ. ಬೀದಿಯಲ್ಲಿ ಕೆಲವು ಗಟು, ಡಂಬು, ನಟ್ಟು ಎರಡೆರಡು ಡಂಬುಗಳಿಗೆ ಕೂಡಿ ತಂತಿ ಅಥವಾ ಮಿಣಿ ಹಗ್ಗ ಬಿಗಿಯುತ್ತಾರೆ. ಹಗ್ಗದ ಮೇಲೆ ತಂತಿಯ ಮೇಲೆ ನಡೆದಾಡುವಾಗ, ಓಡಾಡುವಾಗ ಅದು ಸಣ್ಣ ಸಣ್ಣ ಚಿಲುಮೆ ಪಟ್ಟೆಗೆ ಕೂಡುವಷ್ಟು ಅದನ್ನು ಗಟ್ಟಿಯಾಗಿ ಬಿಗಿದು ನಟ್ಟಿ ಡಂಬುಗಳ ಎರಡೂ ಬದಿಗೆ ಜಡಿದ ಗೂಟಗಳಿಗೆ ಹಗ್ಗದಿಂದ ಕಗ್ಗಂಟು ಹಾಕಿ ಭದ್ರಪಡಿಸಲಾಗುತ್ತದೆ. ಡೊಂಬರ ಬಾಲಕ, ಬಾಲಕಿಯರು ಈ ಹಗ್ಗ ಅಥವಾ ತಂತಿಯ ಮೇಲೆ ನಡೆಯುವಾಗ, ಓಡಾಡುವಾಗ ಸುತ್ತ ನೆರೆದ ಜನರಿಗೆ ಅದ್ಭುತವಾಗಿ ಕಾಣುತ್ತದೆ. ಅವರ ಎದೆಯೊಳಗೆ ಸಾವಿನ ಭಯ ಇರುತ್ತದೆ. ಆದರೂ ಸಹ ಧೈರ್ಯದಿಂದ ಅದನ್ನು ಎದುರಿಸಿ ನಿಲ್ಲುತ್ತಾರೆ. ಪ್ರತಿದಿನ ಸಾವಿನ ದವಡೆಯ ಬದುಕನ್ನು ಡೊಂಬರ ಮಕ್ಕಳು ಬದುಕಿ ಬರುತ್ತಾರೆ. ಕೆಲವರು ಡೋಲು ಬಾರಿಸುವುದು. ಲಾಗ ಹಾಕುವುದು ನಡೆದೇ ಇರುತ್ತದೆ. ಮೋಡಿಮಾಡುವ, ಮಾಟ ಮಂತ್ರ ಮಾಡಿ ಜನರಿಗೆ ಮೋಡಿ ಮಾಡಿ ಜನರನ್ನು ಮೆಚ್ಚಿಸುವ ಕೆಲಸ ಮಾಡುತ್ತಾರೆ. ರಂಗೋಲಿ ಹಾಕಿ ಕುಂಕುಮದಿಂದ ಪೂಜಿಸುವ ವಿವಿಧ ಮೋಡಿಯ ಆಟಗಳನ್ನು ಆಡುತ್ತಾರೆ. ಪುರುಷನೊಬ್ಬನು ಚಾಟಿ ಅಥವಾ ಬಾರುಕೋಲುನಿಂದ ತನ್ನ ಮೈಗೆ ತಾನೆ ಹೊಡೆದುಕೊಳ್ಳುವುದು. ಒಬ್ಬಳ ಹೆಜ್ಜೆಯ ದಾರಿಯಲ್ಲಿ ಇನ್ನೊಬ್ಬಳ ಹೆಜ್ಜೆದಾರಿಗೆ ತೊಡಕಾಗದಂತೆ ಥಕಥಕ ಓಡಾಡುವುದು. ಒಬ್ಬೊಬ್ಬರು ಬಾಗಿ ಬಾಗಿ ನಡೆಯುವುದು. ಆಯ ತಪ್ಪದಂತೆ ತಂತಿಯ ಮೇಲೆ ಕುಣಿಯುವ ಗತ್ತಿನಲ್ಲಿ ಮಣಿ ಮಣಿದು ನಗೆ ಚೆಲ್ಲುವುದು. ಈ ಎಲ್ಲ ಲಗುಬಗೆಯ ಪ್ರದರ್ಶನಗಳು ನಡೆಯುತ್ತಿರುವಾಗ ಪ್ರತಿಯೊಂದರ ಗತಿಗೆ ಅನುಗುಣವಾಗಿ ಡೋಲು ಬಡಿಯುವುದು, ಡಮರು ಬಾರಿಸುವುದು. ಗಟ್ಟಿಮುಟ್ಟಿನ ಜಟ್ಟಿಗಳು ಕಣಕ್ಕಿಳಿಯುತ್ತಾರೆ. ಕುಸ್ತಿಕಲೆಯಲ್ಲಿ ಡೊಂಬರ ವಿಶೇಷ ಪರಿಣಿತರಾಗಿರುತ್ತಾರೆ. ಕತ್ತಿವರಸೆ

ಗಾತ್ರದ ಕರೀಕಲ್ಲು ಗುಂಡು ಅನಾಮತ್ತಾಗಿ ಎತ್ತಿ ಹೇಗೆ ಮೇಲಿಂದ ಹಿಂದೆ ವಿತ್ತೆ ಚೆಲ್ಲುವುದು. ತುಂಬಿದ ಕೊಡವನ್ನು ಹಲ್ಲುಗಳೆಯಿಂದ ಎತ್ತುವುದು ಡೊಂಬರಾಟದ ಸ್ಥೂಲ ಚಿತ್ರಣ. ದೈಹಿಕ ಕಸರತ್ತೇ ಪ್ರಧಾನವಾದ ಇವರ ಪ್ರದರ್ಶನದಲ್ಲಿ ಪುರುಷರಷ್ಟೇ ಮಹಿಳೆಯರ ಭಾಗವಹಿಸುವಿಕೆಯೂ ಇರುತ್ತದೆ. ಅತ್ಯಂತ ಕುಶಲ ಮತ್ತು ಸಂಕೀರ್ಣ ಕಸರತ್ತುಗಳನ್ನು ಸ್ತ್ರೀಯರೇ ನಿರ್ವಹಿಸುತ್ತಾರೆ. ಅಲ್ಲದೆ ಪ್ರದರ್ಶನಕ್ಕೆ ತಕ್ಕಂತೆ ವೇಷಭೂಷಣಗಳನ್ನು ಧರಿಸುವುದೂ ಅನಿವಾರ್ಯ. ಆಧುನಿಕ ಸರ್ಕಸ್ಸಿನಲ್ಲೂ ಸಹ ಮಹಿಳೆಯರೇ ಪ್ರಮುಖ ಆಕರ್ಷಣೆಯ ಕೇಂದ್ರವಾಗಿರುತ್ತಾರೆ. ಝುಗಮುಗಿಸುವ ತೊಡುಗೆಗಳನ್ನು ತೊಟ್ಟ ಹುಡುಗಿಯರು ರಂಗದ ಮಧ್ಯೆ ಮಿಂಚಿನಂತೆ ಬಂದು ಮೀನಿನಂತೆ ಬಳುಕಿ ಜನರನ್ನು ರಂಜಿಸುತ್ತಾರೆ. ಆದರೆ ಸಾಂಪ್ರ ದಾಯಿಕ ಡೊಂಬರಾಟದಲ್ಲಿ ತಾಂತ್ರಿಕತೆಯ ನೆರವಿಲ್ಲ. ಇದ್ದಕ್ಕಿದ್ದಂತೆ ಜನರನ್ನು ದಂಗುಬಡಿಸಬಲ್ಲ ಪರಿಕರಗಳಿಲ್ಲ. ಇಲ್ಲಿ ಅಂದಿನ ದಿನದ ಒಂದು ಹೊತ್ತಿನ ಊಟದ ಅಗತ್ಯತೆ ಇದೆ. ಕಾರಣ ಬಡತನ. ಅದಕ್ಕಾಗಿಯೇ ಸೀಮಿತ ಪರಿಕರಗಳು, ಸಣ್ಣ ಸಣ್ಣ ಪ್ರದರ್ಶನಗಳು, ಕೆಲವೇ ಜನರನ್ನು ಆಕರ್ಷಿಸುವ ಸಾಮಾನ್ಯ ಕಸರತ್ತುಗಳನ್ನು ಮಾತ್ರ ಇಂದು ಡೊಂಬರಾಟದಲ್ಲಿ ನೋಡಲು ಸಾಧ್ಯ.

ಇಲ್ಲಿ ಮಹಿಳೆ ಮೇಲೆ ಹೇಳಿದಂತೆ, ಪ್ರದರ್ಶನದ ಬಹಳ ಮುಖ್ಯವಾದ ಕಸರತ್ತುಗಳಲ್ಲಿ ಭಾಗವಹಿಸುತ್ತಾಳೆ. ತಾನು ಈಗ 'ಪ್ರದರ್ಶನದ ವಸ್ತು' ಎಂಬ ಸಂಗತಿ ಅವಳನ್ನು ಬಾಧಿಸುವುದೇ ಇಲ್ಲ. ಅಂದಿನ ಪ್ರದರ್ಶನದ 'ಮಹತ್ವ' ಸಾಮಾನ್ಯವಾಗಿ ಅವಳಲ್ಲಿ ದಿವ್ಯ ನಿರ್ಲಿಪ್ತತೆಯನ್ನು ತಂದಿರುತ್ತದೆ. ಪ್ರದರ್ಶನದ ಸಂದರ್ಭದಲ್ಲಿ ನುಡಿಸುವ ಸಂಗೀತ ಸಹಜವಾಗಿಯೇ ಅವಳ ಕಸರತ್ತುಗಳಿಗೆ ಲಾಲಿತ್ಯವನ್ನು ಕಲ್ಪಿಸುತ್ತದೆ. ಪ್ರದರ್ಶನ, ನಟನೆ, ಕಸರತ್ತು ಎಲ್ಲವೂ ಆಗಿ ನೋಡುಗರನ್ನು ಸೆಳೆಯುತ್ತದೆ. ಹೀಗಾಗಿ ಡೊಂಬರ ಮಹಿಳೆಗೆ ಸಂಗೀತ ಮತ್ತು ನಟನೆಗಳು ಸಹಜವಾಗಿಯೇ ಲಭಿಸಿವೆ. ಅಲ್ಲದೆ ಡೊಂಬರ ಮಹಿಳೆ, ಈ ಶ್ರೇಣೀಕೃತ ಸಮಾಜದ ಕೆಲವು ಆಚರಣೆಗಳಲ್ಲೂ ಪ್ರದರ್ಶನದ ವಸ್ತುವಾಗಿ ಬಿಡುತ್ತಾಳೆ. ಮುಖ್ಯವಾಗಿ ಈ ಆಚರಣೆಗಳು ಡೊಂಬರ ಸಮುದಾಯದ ಮಹಿಳೆಯನ್ನ ವಿಚಿತ್ರ ಶೋಷಣೆಗೆ ಈಡುಮಾಡುವ ಹುನ್ನಾರುಗಳನ್ನೇ ತಮ್ಮಲ್ಲಿಟ್ಟುಕೊಂಡಿವೆ.

## ಆ. ಡೊಂಬರ ಸಾಂಸ್ಕೃತಿಕ ಆಚರಣೆಗಳು

ಡೊಂಬರ ಸಾಂಸ್ಕೃತಿಕ ಆಚರಣೆಗಳು ಮುಖ್ಯವಾಗಿ ರಂಗಭೂಮಿಯನ್ನು ಪ್ರವೇಶ ಮಾಡುವಂತಹ ಆಚರಣೆಗಳನ್ನು ಕೆಲವು ವಿವರಣೆ ನೀಡಿದ್ದಾನೆ. ರಂಗಪರಂಪರೆ ಧಾರ್ಮಿಕ ಆಚರಣೆಯ ಒಂದು ಭಾಗವಾಗಿ ಬೆಳೆದುಬಂದಿದೆ. ದೇವರ ಆರಾಧನೆ ಒಂದು ಭಾಗವಾದ ರಂಗಸೇವೆ ಮಾಡುವುದು ರಂಗಪರಂಪರೆಯನ್ನು ಹುಟ್ಟುಹಾಕಿದೆ. "ಕರ್ನಾಟಕದ ಜನಪದ ಕಲಾವೈಭವವನ್ನು ಎತ್ತರಿಸಿದ ವಿವಿಧ ನಾಟಕ ಪರಂಪರೆಗಳಿಗೆ

ಮೂಲವಾದದ್ದು. ಇಲ್ಲಿಯ ಜನತೆಯ ಧರ್ಮಭಾವ, ಈ ಧರ್ಮಭಾವಗಳಿಗೆ ಅನುಗುಣವಾಗಿ ಮೈತಾಳಿ ನಿಂತ ಅನೇಕ ನಾಟ್ಯರೂಪಗಳು ಇನ್ನೂ ಜೀವಂತವಾಗಿವೆ. ಜಾತ್ರೆ, ಉತ್ಸವ, ಹಬ್ಬ ಹರಿದಿನಗಳಲ್ಲಿ ದೈವಭಕ್ತಿಯ ದ್ಯೋತಕವಾಗಿ ಸಮಾಜದ ಆನಂದ ಪ್ರತ್ಯೇಕವಾಗಿ ಬಡತನದ ನಿವಾರಣೆಯ ಉಪಜೀವನ ವೃತ್ತಿಯಾಗಿ ನಾನಾ ಮುಖವಾಗಿ ಇನ್ನೂ ಇಂತಹ ನೂರಾರು ರೂಪಗಳು ಅಲ್ಲಲ್ಲಿ ಕಣ್ಣಿಗೆ ಬೀಳುತ್ತವೆ."[೩]

ಡೊಂಬರ ಸಮುದಾಯದಲ್ಲಿ ಬರುವ ಜೋಗತಿ ಸಂಪ್ರದಾಯ, ಹನುಮಂತನ ಓಕುಳಿ, ಡೊಳ್ಳುಪ್ರಸ್ಥ, ಡೊಂಬರ ಹಬ್ಬ ಇವು ರಂಭೂಮಿಗೆ ಪ್ರೇರಣೆ ನೀಡುವ ಆಚರಣೆಗಳಾಗಿವೆ.

### ೧. ಜೋಗುತಿ ಸಂಪ್ರದಾಯ

ಎಲ್ಲಮ್ಮನ ಆರಾಧಕರಾದ ಜೋಗತಿಯರು ಮತ್ತು ಜೋಗಯ್ಯನವರು ಇವರು ಎಲ್ಲಮ್ಮ ಚರಿತ್ರೆಯನ್ನು ಹಾಡುತ್ತಾ ಊರಿನಿಂದ ಊರಿಗೆ ಅಲೆಯುತ್ತಾರೆ "ಎಲ್ಲಮ್ಮನ ಜೋಗುತಿಯರು ಕುಣಿತವು ನಾಟಕೀಯ ಗುಣಗಳಿಂದ ಕೂಡಿರುತ್ತದೆ. ಸವದತ್ತಿಯ ಎಲ್ಲಮ್ಮನ ಭಕ್ತರಾದ ಇವರು ಒಂದು ತಾಮ್ರದ ಬಿಂದಿಗೆಯನ್ನು ನೀರು ತುಂಬಿ ಅದರ ಒಂದು ಭಾಗಕ್ಕೆ ಎಲ್ಲಮ್ಮನ ಹಿತ್ತಾಳೆಯ ಮುಖವನ್ನು ಅಂಟಿಸಿ ತಲೆಯ ಮೇಲೆ ಇಟ್ಟುಕೊಳ್ಳುತ್ತಾರೆ. ಎಲ್ಲಮ್ಮನ ಮಹಿಮೆಯನ್ನು ಸ್ತುತಿಸುತ್ತಿ ಕುಣಿಯುತ್ತಾಳೆ. ಹಿಂದೆ ಇಬ್ಬರು 'ತುಂತುಣಿ' ಇಲ್ಲಿವೆ ಚಾಡಿಕೆ ಎಂಬ ವಾದ್ಯವನ್ನು ಬಾರಿಸುತ್ತಾರೆ. ಎರಡೂ ಕೈಗಳನ್ನು ಬಿಟ್ಟು ತಲೆಯ ಮೇಲಿಂದ ತುಂಬಿದ ಕೊಡ ಬೀಳದಂತೆ ಹಾಡುತ್ತಾಳೆ, ಆಡುತ್ತಾಳೆ, ಕುಣಿಯುತ್ತಾಳೆ, ಭಕ್ತರಿಗೆ ಹರಕೆಯನ್ನು ಕೊಡುತ್ತಾಳೆ, ಎಲ್ಲವೂ ಒಂದು ನಾಟಕ ನೋಡಿದಂತೆ ಭಾವಪೂರ್ಣವಾದ ದೃಶ್ಯವಾಗುತ್ತದೆ."[೪]

ಎಲ್ಲಮ್ಮ ದೇವಿಯ ಸೇವೆಗಾಗಿ ದೀಕ್ಷೆ ಪಡೆದುಕೊಂಡ ಜೋಗತಿಯರು ಮತ್ತು ಜೋಗಪ್ಪನವರು ಚೌಡಿಕೆ ವಾದ್ಯ ನುಡಿಸುತ್ತ, ದೇವಿಯ ಚರಿತ್ರೆಯನ್ನು ಹಾಡುತ್ತ ಬರುವವರನ್ನು ಚೌಡಿಕೆ ಮೇಳದವರು ಎಂದು ಕರೆಯುತ್ತಾರೆ. ದೀಕ್ಷೆ ತೆಗೆದುಕೊಂಡವರು ಒಂದು ವಾರದಲ್ಲಿ ಒಂದು ದಿನ ಅಥವಾ ವಿಶೇಷ ಹಬ್ಬಗಳಲ್ಲಿ ಯುಗಾದಿ, ದಸರಾ ಮುಂತಾದ ಹಬ್ಬಗಳಲ್ಲಿ ಕೊನೆ ಪಕ್ಷ ಐದು ಮನೆಗಳಿಗೆ ಹೋಗಿ ಚೌಡಿಕೆ ಬಾರಿಸುತ್ತ, ಹಾಡುತ್ತಾ ಭಿಕ್ಷೆ ಬೇಡಿ ತರಬೇಕು. ಇದು ನಿಯಮವಾಗಿದೆ. ಈ ನಿಯಮಕ್ಕೆ ದೀಕ್ಷೆ ತೆಗೆದುಕೊಂಡು ಬದ್ಧರಾಗಿರಬೇಕು. ಡೊಂಬರ ಸಮುದಾಯದಲ್ಲಿ ದೇವರಿಗೆ ಬಿಡುವ ಪದ್ಧತಿ ಇದೆ. ಇದಕ್ಕೆ ಮುತ್ತು ಕಟ್ಟಿಸುವುದು, ದೇವರಿಗೆ ಬಿಡುವುದು, ದೇವರು ಹೊರುವುದು ಎಂಬ ಹೆಸರುಗಳಿಂದ ಈ ಪದ್ಧತಿಯನ್ನು ಕರೆಯುತ್ತಾರೆ. ಈ ಸಂಪ್ರದಾಯ ಮುಖ್ಯವಾಗಿ ಮಹಿಳೆಯನ್ನೇ ಕೇಂದ್ರವಾಗಿಟ್ಟಿರುವಂತಹದ್ದು. ಇಲ್ಲಿಯೂ ಮಹಿಳೆ ಚೌಡಿಕೆ ಹಿಡಿದು ಹಾಡುತ್ತಾ ಮನೆ ಮನೆಗಳನ್ನು ಸುತ್ತಿ ಭಿಕ್ಷೆ ಎತ್ತಬೇಕು. ಎಲ್ಲಮ್ಮನ ಹೆಸರಲ್ಲಿ ಮನೆಯಲ್ಲಿ ಬಿಟ್ಟ ಹೆಣ್ಣು ಲೈಂಗಿಕವಾಗಿ ಯಾರ ಸ್ವತ್ತೂ

ಆಗಬಹುದು. ಜೋಗತಿ ಸಂಪ್ರದಾಯದಲ್ಲೂ ಈ ಸಮುದಾಯದ ಮಹಿಳೆಯು ತನ್ನನ್ನು ತಾನು ಸಾರ್ವಜನಿಕವಾಗಿ ಪ್ರದರ್ಶನಕ್ಕಿಟ್ಟುಕೊಳ್ಳುವ ಪರಂಪರೆ ಬೆಳೆದು ಬಂದಿದೆ.

೨. ಹನುಮಂತ ದೇವರ ಓಕುಳಿ

ಹನುಮಂತ ದೇವರ ಓಕುಳಿಯನ್ನು ಹೆಚ್ಚು ಉತ್ತರ ಕರ್ನಾಟಕದಲ್ಲಿ ನೋಡಬಹುದು "ಹನುಮಂತನ ಜಾತ್ರೆ ಹಿಂದಿನ ದಿನ ಆ ಗ್ರಾಮದ ದೇವದಾಸಿಯರಾದ ಐವರಿಗೆ ವೀಳ್ಯ ಕೊಟ್ಟು ಬರುವರು ಮಾರನೆಯ ದಿನ ಮುಂಜಾನೆ ಹನುಮಂತನ ಗುಡಿ ಮುಂದಿರುವ ಹೊಂಡವನ್ನು ನೀರಿನಿಂದ ಸ್ವಚ್ಛವಾಗಿ ತೊಳೆದು ಅದರ ತುಂಬ ತಿಳಿಯಾದ ನೀರು ತುಂಬುತ್ತಾರೆ. ಅದರಲ್ಲಿ ಸುಣ್ಣ ಮತ್ತು ಅರಿಷಿಣ ಪುಡಿಯನ್ನು ಬೆರೆಸುವರು. ಅನಂತರ ಉದ್ದನೆಯ ಬಿರುಸಾದ ತಕ್ಕಿಯ ಪೋಕ (ಕೋಲು)ಗಳನ್ನು ಕಡಿದು ತರುವರು. ಇವಕ್ಕೆ ಓಕಳ ಬೆತ್ತ ಓಕಳಿಕೋಲು ಎಂದು ಕರೆಯುವರು. ಹೊಂಡವನ್ನು ಶಾಸ್ತ್ರೋಸ್ತ್ರವಾಗಿ ಪೂಜಿಸುವರು. ದೇವದಾಸಿಯರಿಗೆ ವೀಳ್ಯೆ ಕೊಟ್ಟು ಓಕುಳಿ ಕೋಲ ತರುವಾಗ ಹಲಗೆ, ಕಹಳೆ, ಸನಾಯಿ ಮುಂತಾದ ವಾದ್ಯ ಮೇಳವಿರುತ್ತದೆ. ಆ ಗ್ರಾಮದಲ್ಲಿ ದೇವದಾಸಿಯರು ಇರದಿದ್ದರೆ ಪಕ್ಕದ ಊರಿಗೆ ದೇವದಾಸಿಯರಿಗೆ ಅಥವಾ ಓಕುಳಿಯಾಡಲು ವೀಳ್ಯೆದೆಲೆ ಕೊಟ್ಟುಬರುತ್ತಾರೆ ಇವರು ಒಪ್ಪದಿದ್ದರೆ ಓಕಳಿಯಾಟವೇ ನಿಲ್ಲುತ್ತದೆ ಎಂದು ಹೇಳುತ್ತಾರೆ. ಸವರ್ಣೀಯ ಗಂಡಸರ, ದಲಿತ ಹೆಂಗಸರ ನಡುವಿನ ಆಟ ಇದಾಗಿದೆ."[೫]

ಓಕುಳಿಯ ನಂತರ ಹನುಮಂತ ಗುಡಿಯ ಮುಂದೆ ಬಯಲಾಟದ ನಾಟಕಗಳನ್ನು ಏರ್ಪಡಿಸುತ್ತಾರೆ. ನಾಟಕ ಪಾತ್ರ ವಹಿಸುವರು ಹರಕೆಯನ್ನು ಮಾಡಿಕೊಳ್ಳುತ್ತಿದ್ದರು. ಮಹಾಲಿಂಗಾಪುರ ನಿಂಗಮ್ಮನ ಮನೆತನದವರು ಇಂದಿಗೂ ಸಹ ಮೇಳವನ್ನು ನಡೆಸಿಕೊಂಡು ಬರುತ್ತಿದ್ದಾರೆ. ಪ್ರತಿವರ್ಷ ಮಾಮೂಲಿನಂತೆ ಕೌಜಲಗಿ ಹನುಮಂತ ದೇವರ ಓಕುಳಿಗೆ ಅವರು ಬಂದು ತನ್ನ ಆಟದ ಸೇವೆ ಸಮರ್ಪಿಸಿ ಹೋಗುತ್ತಾರೆ. ರಂಗ ಪರಂಪರೆಯಾಗಿ ಒಂದು ವಿಶೇಷ ಸೇವೆಯಾಗಿ ಬೆಳೆದುಕೊಂಡು ಬಂದಿದೆ. ಕೌಜಲಗಿ ನಿಂಗಮ್ಮನ ತಾಯಿಯೂ ಸಹ ಓಕುಳಿ ಆಟರಣೆಯಲ್ಲಿ ಭಾಗವಹಿಸುವ ಅನಿವಾರ್ಯತೆಗೆ ಒಳಗಾಗಿದ್ದಳು. ಸಾರ್ವಜನಿಕವಾಗಿ ಎಲ್ಲರೂ ದೇವದಾಸಿಯಾದ ಮಹಿಳೆಗೆ ಹೀಗೆ ಓಕುಳಿ ಎರಚುವ ಸಂಪ್ರದಾಯದಿಂದ ನಿಂಗಮ್ಮನ ತಾಯಿ ಸಹಜವಾಗಿ ಅವಮಾನಿತಳಾಗಿರುವ ಸಾಧ್ಯತೆಗಳಿವೆ. ಆ ಕಾರಣಕ್ಕಾಗಿಯೇ ಆಕೆ ತನ್ನ ಮಗಳನ್ನು ಈ ಹೀನ ಆಚರಣೆಗಳಿಂದ ದೂರವಿಡಲೆಂದೇ ಸಂಗೀತ ಕಲಿಯಲು ಕಳುಹಿಸಿದಳು. ಶ್ರೀರಾಮ ಇಟ್ಟಣ್ಣನವರು ತನ್ನಂತೆ ತನ್ನ ಮಗಳು ಅವಮಾನಿತಳಾಗುವುದು ಅವಳಿಗೆ ಇಷ್ಟವಿರಲಿಲ್ಲ. ಸಮಾಜದಲ್ಲಿ ತನ್ನ ಮಗಳು ಪ್ರತಿಷ್ಠಿತ ವ್ಯಕ್ತಿತ್ವವಾಗಿ ಬೆಳೆಯಬೇಕೆಂದು ಬಯಸಿದ್ದು, ತಾನು ಪಟ್ಟ ಪಾಡಿನಿಂದ ಎಂದೇ ಹೇಳಬೇಕಾಗುತ್ತದೆ.

ದೇವಾಲಯಗಳು ಜನಸಮುದಾಯವನ್ನು ಆಕರ್ಷಿಸಲು ಧರ್ಮದ ಹೆಸರಿನಲ್ಲಿ ಕೆಳಜಾತಿಯ ಸ್ತ್ರೀಯರನ್ನು ಕುಣಿತ ಸಂಗೀತಕ್ಕೆ ಬಳಸಿಕೊಂಡಿದ್ದಾರೆ. ಹೀಗೆ ಸ್ತ್ರೀಯನ್ನು ಮನರಂಜನೆ ವಸ್ತುವನ್ನಾಗಿಸಿಕೊಂಡು ತಮ್ಮ ಅಗತ್ಯಕ್ಕೆ ಅನುಗುಣವಾಗಿ ಜನಾಂಗಗಳನ್ನು ಸೃಷ್ಟಿಸಿಕೊಂಡಿದ್ದಾರೆ. ಸಮಾಜದಲ್ಲಿ ಧಾರ್ಮಿಕ ಹೆಸರಿನಲ್ಲಿ ರಂಗಪರಂಪರೆ ಬೆಳೆದುಕೊಂಡು ಬಂದಿದೆ. ನೃತ್ಯ ಸಂಗೀತ ಪ್ರದಾನ ಕಲೆಗಳು ತಮ್ಮದಾಗಿಸಿ ಕೊಂಡವರು ಡೊಂಬರು, ಪಾತರದವರು ಜಾತಿಗಾರರು. ಇವರು ಪ್ರದರ್ಶನ ಕಲೆಗಳು ತಮ್ಮ ವೃತ್ತಿ ಯಾಗಿಸಿಕೊಂಡಿದ್ದಾರೆ. ಸಾಂಸ್ಕೃತಿಕ ಆಚರಣೆಗಳು ಸಹ ತಮ್ಮ ತಮ್ಮಗೆ ಅನುಸಾರವಾಗಿರುತ್ತವೆ ಹಾಗೆ ಡೊಂಬರು ಆಚರಣೆಗಳಲ್ಲಿ ಸಹ ನೋಡಬಹುದು.

೩. ಡೊಂಬರ ಹಬ್ಬ

ಶಿವಮೊಗ್ಗ ಜಿಲ್ಲೆಯ ಕೆಲವು ಹಳ್ಳಿಗಳಲ್ಲಿ ಕಂಡುಬರುವ "ಡೊಂಬರ ಹಬ್ಬ" ಈ ಹಬ್ಬವನ್ನು "ಗ್ರಾಮದೇವತೆ"ಯಾದ ಕುಮಾರರಾಮನನ್ನು ಗ್ರಾಮದೇವತೆಯ ವಿಶೇಷ ಪೂಜೆಯಾಗಿದೆ. ಡೊಂಬರ ಹಬ್ಬವನ್ನು ಗ್ರಾಮ ಶಾಂತಿ ಹಬ್ಬ ಎಂದು ಕರೆಯುತ್ತಾರೆ. ಚರಿತ್ರೆಯಲ್ಲಿ ಬರುವ ಕುಮಾರ ರಾಮನ ಕಥೆಯೊಂದಿಗೆ ತಳಕು ಹಾಕಲಾಗಿದೆ. ಇದಕ್ಕೆ ಅನುಕೂಲವಾಗುವಂತೆ ಹೆಣೆದ ಕಥೆಯ ಪ್ರಕಾರ ಡೊಂಬರಿಗೆ ಪ್ರಾಮುಖ್ಯತೆ ದೊರೆಯುತ್ತದೆ. ತಮ್ಮ ವಂಶಕ್ಕೆ ತಗುಲಿದ ಶಾಪದಿಂದಾಗಿ ಡೊಂಬತಿಯರು ಈ ಹಬ್ಬದಂದು ಕುಮಾರರಾಮ ಮತ್ತು ಹೋಲಿಕೆ ರಾಮನ ಮುಖವಾಡದ ಮುಂದೆ ಹಾಡಿ ನರ್ತಿಸುತ್ತಾರೆ. ಅವರು ನರ್ತಿಸುವಾಗ ಅವರ ಎದೆಯ ಮೇಲೆ ಬಿಳಿಯ ಸೆರಗನ್ನು ಹೊದ್ದಿರುತ್ತಾರೆ. ಊರನ್ನು ಕಾಯುವ ದೈವಗಳಾದ ಭೂತ, ಚೇಡಿ ಮಾಸ್ರಿ ಇತ್ಯಾದಿ ದೇವರ ಜಾಗದ ಎದುರು ದೇವರ ಪಹಲೆ ನಿಂತು ಡೊಂಬತಿಯರ ನರ್ತನಸೇವೆ ನಡೆಯುತ್ತದೆ."[೬]

ಡೊಂಬರ ಹಬ್ಬದ ಆಚರಣೆ ಮುಖ್ಯವಾಗಿ ದೊಂಬ ತಿರುಪತಿಗೆ ದೇವದಾಸಿ ಪದ್ಧತಿಯ ಅನುಸಾರ ವಾಗಿರುತ್ತದೆ. ಡೊಂಬತಿಯರನ್ನು ಡೊಳ್ಳು ಪ್ರಸ್ಥದ ಮೂಲಕ ವೇಶ್ಯಾವೃತ್ತಿಗೆ ತಳ್ಳುವ ಒಂದು ಆಚರಣೆ ಯಾಗಿದೆ ಎಂದು ಹೇಳಬಹುದು. ಈ ಡೊಂಬರ ಹಬ್ಬದ ವಿಶೇಷವಾಗಿ ಡೊಂಬತಿಯರನ್ನು ಬೀದಿಗಳಲ್ಲಿ ಕುಣಿಸುತ್ತಾರೆ. "ಮಲೆನಾಡಿನ ಹಳ್ಳಿಗಳಲ್ಲಿ ಕುಮಾರರಾಮ ಗ್ರಾಮದೇವತೆಯ ಸಲುವಾಗಿ ವರ್ಷಕ್ಕೊಮ್ಮೆ ಹಬ್ಬ, ಉತ್ಸವ ನಡೆಯುತ್ತದೆ. ಆ ಹಬ್ಬದಲ್ಲಿ ಡೊಂಬರಿಗೆ ಹೆಚ್ಚಿನ ಸ್ಥಾನಮಾನವಿರುತ್ತದೆ. ಆ ಸಮಯ ದಲ್ಲಿ ಗ್ರಾಮ ದೇವರು ಗಣಪಾತ್ರಿಯ ಮೇಲೆ ಬರುತ್ತದೆ. ದೇವರನ್ನು ಮೈದುಂಬುವಂತೆ ಮಾಡಿ ಕುಣಿಸು ವವನು ಡೊಂಬನ ಡೊಳ್ಳಿನ ಬಡಿತ. ದೇವರನ್ನು ತಮ್ಮ ನೃತ್ಯ ಸಂಗೀತದಿಂದ ಸಂಪ್ರೀತಗೊಳಿಸುವವರು ಡೊಂಬತಿಯರು.

"ಸಾಮಾನ್ಯವಾಗಿ ಇಬ್ಬರು ಡೊಂಬತಿಯರು ಡೊಂಬರ ನಾಯಕ, ಮೃದಂಗ ಮತ್ತು ತಾಳಕ್ಕೆ ಇಬ್ಬರು ಡೊಂಬರು ಭಾಗವಹಿಸುತ್ತಾರೆ. ನೃತ್ಯದಲ್ಲಿ ಭಾಗವಹಿಸುವ ಡೊಂಬತಿಯರು ವೃಥಸ್ಥ ಸೂಳೆಯರಾಗಿರಬೇಕು. ಇದಕ್ಕೆ ಕಾರಣ ಕುಮಾರರಾಮನ ಶಾಪ ಡೊಂಬತಿಯರನ್ನು ಈ ಆಚರಣೆ ಸಹ ಜನಪದ ರಂಗಭೂಮಿಯನ್ನು ಪ್ರವೇಶಿಸುವಂತೆ ಮಾಡಿರಬಹುದು."[೭]

ಎಲ್ಲಮ್ಮನ ಆರಾಧನೆ, ಡೊಂಬರ ಹಬ್ಬ, ಹನುಮಂತನ ಒಕುಳಿ ಈ ಮೂರು ಆಚರಣೆಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಮೇಲ್ವರ್ಗದವರು ಈ ಆಚರಣೆ ಹುಟ್ಟುಹಾಕಿದ್ದಾರೆ. ಧಾರ್ಮಿಕ ನೆಲೆಯಲ್ಲಿ ಕೆಳಜಾತಿಯ ಸ್ತ್ರೀಯರ ಮೇಲೆ ನಡೆಯುವ ಶೋಷಣೆಯಾಗಿದೆ. ಎಲ್ಲಮ್ಮನ ಆರಾಧನೆಯಲ್ಲಿ ಜೋಗತಿ ಯರನ್ನು ವೇಶ್ಯಾವೃತ್ತಿಗೆ ತಳ್ಳುವ ಹಾಗೂ ಡೊಂಬರ ಹಬ್ಬದಲ್ಲಿ ಡೊಂಬತಿಯರು ಬೀದಿಗಳಲ್ಲಿ ಸಂಗೀತ ಮತ್ತು ನೃತ್ಯದ ಮೂಲಕ ಕುಣಿಯುವಂತೆ ಮಾಡುವ ಹಾಗೂ ಹನುಮಂತ ಒಕುಳಿಯಲ್ಲಿ ರಂಗಸೇವೆ ಮಾಡುವ ಹರಕೆಯೂ ಇವುಗಳು ಎಲ್ಲವೂ ರಂಗಭೋಗವನ್ನು ಕಾಯ್ದುಕೊಂಡು ಬರುವ ಹುನ್ನಾರುಗಳೇ ಆಗಿವೆ. ರಂಗಭೋಗ ಮತ್ತು ಅಂಗಭೋಗಗಳ ಸೇವೆಗಳು ಮಾಡುವುದಕ್ಕೆ, ಮೇಲ್ವರ್ಗದವರು ಸಮಾಜ ದಲ್ಲಿ ಕೆಲವು ಸಮುದಾಯಗಳನ್ನು ಹುಟ್ಟುಹಾಕಿದರು. ಅದರ ಜೊತೆಗೆ ಧರ್ಮದ ನಿಯಮಗಳಿಗೆ ಅನುಸಾರವಾಗಿ ನಡೆಯುವಂತೆ ಮಾಡಿದರು. "ಉತ್ತರ ಕರ್ನಾಟಕದಲ್ಲಿ ಶ್ರೀಕೃಷ್ಣ ಪಾರಿಜಾತವೇ ಮುಂತಾದ ಆಟಗಳಿಗೋಸ್ಕರ ವೃತ್ತಿ ನಟಿಯರನ್ನು ಒದಗಿಸಿಕೊಡುವ ಪ್ರತ್ಯೇಕ ಜಾತಿವಂಶಗಳೆ ಇದ್ದುಕೊಂಡಿವೆ. ಬಳ್ಳಾರಿ ಜಿಲ್ಲೆಯ ಕೆಲವು ಊರುಗಳು ಮೀಸಲು ನಟಿಯರನ್ನು ಸೃಜಿಸಿಕೊಡುವ ಕೈಕಾರ್ಯವನ್ನು ಪರಂಪರಾಗತವಾಗಿ ಕೈಗೊಂಡು ಬಂದಿವೆ. ಅಲ್ಲಿನ ಗೃಹಸ್ಥ ಕುಟುಂಬಗಳು ಅದೊಂದು ವೃತ್ತಿಯೆನ್ನುವ ತರದಲ್ಲಿ, ಮನೆಯ ಮೊದಲ ಹೆಣ್ಣು ಮಗುವನ್ನು ನಟಿಯಾಗಲು ಮೀಸಲಿಡುತ್ತಾರೆ. ಹಲವು ಕಡೆಗಳಲ್ಲಿ ದೇವದಾಸಿ ವೇಶ್ಯ ಕುಲದವರು ರಂಗಭೂಮಿಗಾಗಿ ತರಬೇತಿ ಪಡೆದುಕೊಂಡು ಅದನ್ನು ವೃತ್ತಿಯಾಗಿಸಿ ಕೈಗೊಂಡುದ್ದುಂಟು."[೮] ಹೀಗೆ ಡೊಂಬರ ಸಮುದಾಯವು ರಂಗಭೂಮಿಯ ಜೊತೆ ಬೆಳೆದುಕೊಂಡು ಬಂದಿದೆ.

## ೩. ರಂಗಭೂಮಿಯ ಜೊತೆಗಿನ ಸಂಬಂಧ

ರಂಗಭೂಮಿಯಲ್ಲಿ ಕಲಾವಿದರ ಪಾತ್ರ ಬಹು ಮುಖ್ಯವಾದುದು. ಅಭಿನಯ ಕಲೆಗೆ ಜೀವಕಳೆ ತುಂಬುತ್ತಾರೆ. ಕಲಾವಿದರು ಕಲೆಗೆ ತಮ್ಮನ್ನು ತಾವೆ ಅರ್ಪಿಸಿಕೊಂಡಿರುತ್ತಾರೆ. ಕಲೆಯೇ ಅವರ ಉಸಿರಾಗಿರುತ್ತದೆ, ಕಲೆಯೇ ಅವರ ಬದುಕಾಗಿರುತ್ತದೆ. ಕಲಾವಿದರು ತಾವು ಬದುಕುತ್ತ ಕಲೆಯನ್ನು ಜೀವಂತವಾಗಿರಿಸಿಕೊಂಡು ಬರುತ್ತಾರೆ.

ರಂಗಭೂಮಿ ರೂಪಗೊಳ್ಳುತ್ತಿದ್ದ ಆರಂಭದಲ್ಲಿ ರಂಗನಟಿಯರಾಗಲು ಮುಂದೆ ಬಂದವರು ಕೆಳಜಾತಿಯ ಮಹಿಳೆಯರೆ ಆಗಿದ್ದಾರೆ. ಸಮಾಜದಲ್ಲಿ ಎಲ್ಲ ಜಾತಿ ಮತಗಳಿಂದ ಕಲಾವಿದರು ರಂಗಭೂಮಿಗೆ ಬಂದಿದ್ದಾರೆ. ಕಲಾವಿದೆಯರು ಹೆಚ್ಚು ಕೆಳವರ್ಗಗಳಿಂದ ಬಂದಿದ್ದಾರೆ. ಈ ಕಲಾವಿದರಿಗೆ ರಂಗಭೂಮಿ ಆರ್ಥಿಕ ಭದ್ರತೆಯನ್ನು ಕೊಡಲಾರದು. ಈ ವೃತ್ತಿಯನ್ನು ಅವಲಂಬಿಸಿದ ವ್ಯಕ್ತಿಗಳು ಸಮಾಜದ ಕಣ್ಣಿನಲ್ಲಿ ಕೀಳಾಗಿ ಕಾಣುತ್ತಾರೆ. ಸ್ತ್ರೀ ಕಲಾವಿದೆಯರ ಬಗ್ಗೆ ಜನಸಾಮಾನ್ಯರಲ್ಲಿ ಒಳ್ಳೆಯ ಅಭಿಪ್ರಾಯ ಇರುವುದಿಲ್ಲ. ಅವರು ಹೆಚ್ಚಾಗಿ ದೇವದಾಸಿ ಸಂಪ್ರದಾಯದಿಂದ ಬಂದವರಾದ್ದರಿಂದ, ಎಷ್ಟೇ ನುರಿತ ಕಲಾವಿದೆಯರಾದರೂ ಅವರ ಬಗೆಗೆ ಗೌರವ ಭಾವ ಮೂಡುವುದು ಸಾಧ್ಯವಾಗುವುದಿಲ್ಲ. ಅಷ್ಟೇ ಅಲ್ಲ ನಟರು ಹಾಳಾದರೆ ಅದಕ್ಕೆ ಸ್ತ್ರೀ ಕಲಾವಿದೆಯರೇ ಕಾರಣವೆನ್ನುವ ಆರೋಪ ತೀರಾ ಸಹಜವಾದುದು. "ಕಳೆದ ಶತಮಾನದಲ್ಲಿ ಹೊಸ ಜಾನಪದ ರಂಗಪ್ರಕಾರಗಳು ಹುಟ್ಟಿಕೊಂಡವು. ಅವುಗಳ ಸ್ವರೂಪ ಮತ್ತು ಆಕಾರಗಳು ಸ್ತ್ರೀ ಪಾತ್ರಕ್ಕೆ ಸ್ತ್ರೀಯರನ್ನೇ ಅಪೇಕ್ಷಿಸಿದವು. ಬದಲಾದ ಸಾಮಾಜಿಕ ಪರಿಸರ ಮತ್ತು ಅನಿವಾರ್ಯತೆಗಳಿಂದಾಗಿ ಮಹಿಳೆಯರು ಜಾನಪದ ರಂಗಭೂಮಿಗೆ ಪ್ರವೇಶಿಸಬೇಕಾಯಿತು."[೯] ರಂಗಭೂಮಿಯಲ್ಲಿ ಮಹಿಳೆಯರು ಭಾಗವಹಿಸುವುದು ಅವಶ್ಯವಾಗಿತ್ತು. ಇಂತಹ ಅವಕಾಶಗಳನ್ನು ಕೆಳಜಾತಿಯ ಸ್ತ್ರೀಯರು ತಮಗಿದ್ದ ಸ್ವತಂತ್ರವನ್ನು ಉಪಯೋಗಿಸಿಕೊಂಡು ರಂಗಭೂಮಿಯನ್ನು ಪ್ರವೇಶ ಮಾಡಿದರು.

೨೦ನೇ ಶತಮಾನದ ಸ್ತ್ರೀವಾದಿ ಚಳುವಳಿಯಲ್ಲಿನ ಸಮಾನತೆ ಧೋರಣೆ ಮತ್ತು ಹಕ್ಕಿನ ಪ್ರತಿಪಾದನೆಯನ್ನು ಸುಮಾರು ನೂರೈವತ್ತು ವರ್ಷಗಳ ಹಿಂದೆ ಮಹಿಳೆಯರ ರಂಗ ಪ್ರವೇಶದ ಸಂದರ್ಭದಲ್ಲಿ ಕಾಣಬಹುದಾಗಿದೆ. ರಂಗವನ್ನು ಪ್ರವೇಶಿದಂತೆ ಸ್ತ್ರೀಯರು ತಮ್ಮ ಸ್ಥಾನಮಾನಗಳನ್ನು ಉಳಿಸಿಕೊಳ್ಳಲು ಅಂದಿನ ಸಾಮಾಜಿಕ ಧೋರಣೆಗಳ ನಡುವೆಯೂ ಹೋರಾಡಿದುದ್ದನ್ನು ನಾವು ಗಮನಿಸಬಹುದು. ನಾಟಕಗಳನ್ನು ನೋಡುವುದು ಮಹಿಳೆಯರ ಪಾಲಿಗೆ ಅಸಾಧ್ಯವೆನ್ನುವಂತಿದ್ದ ಕಾಲದಲ್ಲಿ ಮಹಿಳೆಯರು ರಂಗವನ್ನೇ ಪ್ರವೇಶಿಸಿ ಕ್ರಾಂತಿಯನ್ನು ತಮ್ಮ ಪರಿಮಿತಿಯಲ್ಲಿ ಮಾಡಿದರೆಂಎದು ಹೇಳುವುದರಲ್ಲಿ ಸಂಶಯವಿಲ್ಲ. ಪುರುಷ ಪ್ರಧಾನ ಸಮಾಜದ ಉಸಿರು ಕಟ್ಟುವ ಬಂಧನದಲ್ಲಿದ್ದ ಮಹಿಳೆ ರಂಗ ಮಾಧ್ಯಮದ ಮುಖಾಂತರ ಆಕರ್ಷಿಸಿ ಸದಾ ಮಹಿಳೆಯರಿಗೆ ದುಂಬಾಲು ಬೀಳುವಂತೆ ಮಾಡುವಂತಾಗಿದ್ದು ಇಂತಹ ಒಂದು ಗುಪ್ತ ಕ್ರಾಂತಿಯೆಂದು ಪರಿಣಾಮವೆಂದು ಹೇಳಬಹುದು.

### ೧. ಡೊಂಬರ ಸಮುದಾಯದ ಕಲಾವಿದೆಯರು

ಯಾವುದೇ ಒಂದು ಕಲೆ ವ್ಯಕ್ತಿಗತವಾಗಿ ಬರುವುದಿಲ್ಲ. ಕಲೆಯು ವ್ಯಕ್ತಿಗೆ ಜೈವಿಕವಾಗಿಯೂ ಬರುತ್ತದೆ. ಈ ಕಲೆಯನ್ನು ಸಮುದಾಯ ಬೇಳೆಸಿಕೊಂಡು ಬರುತ್ತದೆ. ಡೊಂಬರ ಸಮುದಾಯದ

ಮಹಿಳೆಯರು ಸಂಗೀತ, ನೃತ್ಯ ಮತ್ತು ಕಲಾ ಪ್ರದರ್ಶನದಲ್ಲಿ ಪರಿಣಿತಿ ಹೊಂದಿದವರು ಈ ಪರಂಪರೆಯನ್ನು ಮೈಗೂಡಿಸಿಕೊಂಡ ಶ್ರೀಮತಿ ಕೌಜಲಗಿ ನಿಂಗಮ್ಮ ಕರ್ನಾಟಕದಲ್ಲಿ ರಂಗಭೂಮಿಗೆ ಮೊಟ್ಟಮೊದಲಿಗೆ ಪ್ರವೇಶಮಾಡಿದ ಮಹಿಳೆ ಡೊಂಬರ ಸಮುದಾಯದ "ಶ್ರೀಮತಿ ಕೌಜಲಿಗಿ ನಿಂಗಮ್ಮ"ನಂತೆ ಈ ಸಮುದಾಯದ ಅನೇಕ ಮಹಿಳೆಯರು ರಂಗಭೂಮಿಯನ್ನು ಪ್ರವೇಶ ಮಾಡಿದ್ದಾರೆ. ಡೊಂಬರ ಸಮುದಾಯದ ಮಹಿಳೆಯರು ರಂಗಭೂಮಿ ಪ್ರವೇಶ ಮಾಡುವ ಸಂದರ್ಭದಲ್ಲಿ ಇದ್ದ ಸಾಮಾಜಿಕ ಒತ್ತಡಗಳು ಯಾವುವು? ಹಾಗೂ ಕಲಾವಿದೆಯರಿಗೆ ಇರುವ ಸಾಮಾಜಿಕ ಸ್ಥಾನಮಾನ ಗುರುತಿಸುವುದು, ಕಲಾವಿದೆಯರ ಬದುಕನ್ನು ತಿಳಿದುಕೊಳ್ಳುವುದು ಹಾಗು ಅವರಿಗಿದ್ದ ಸಮಸ್ಯೆಗಳನ್ನು ಇಲ್ಲಿ ವಿವರಿಸಲು ಯತ್ನಿಸಲಾಗಿದೆ.

### ೧.೧. ಕಲಾವಿದೆ ಶ್ರೀಮತಿ ಸಣ್ಣ ತಿಪ್ಪಮ್ಮ

ಕಲಾವಿದೆಯಾದ ದಿ. ಸಣ್ಣ ತಿಪ್ಪಮ್ಮ ಬಯಲಾಟ ರಂಗಭೂಮಿಯ ಹಿರಿಯ ಕಲಾವಿದೆ ಸುಮಾರು ನೂರೈವತ್ತು ನಾಟಕಗಳಲ್ಲಿ ಪಾತ್ರ ವಹಿಸಿದ್ದಾರೆ. ಪೌರಾಣಿಕ ಅಷ್ಟೇ ಅಲ್ಲದೆ ಸಾಮಾಜಿಕ ನಾಟಕಗಳಲ್ಲಿ ಸಹ ಸುಮಾರು ೨೦-೨೫ ವರ್ಷಗಳವರೆಗೆ ಈಕೆ ರಂಗನಟಿಯಾಗಿ ನಟಿಸಿದ್ದಾಳೆ. ಅಲೆಮಾರಿ ಸಮುದಾಯದ ಡೊಂಬರ ಸಮುದಾಯದಲ್ಲಿ ಹುಟ್ಟಿದ ಸಣ್ಣ ತಿಪ್ಪಮ್ಮ ಸ್ವತಂತ್ರಪೂರ್ವ ಸು.೧೯೩೫ರಂದು ಕೂಡ್ಲಿಗಿಯಲ್ಲಿ ಜನಿಸಿದರು. ತಂದೆ ಪರಸಪ್ಪ ತಾಯಿ ನಾಗಮ್ಮ ಇವರ ಮಗಳು ಸಣ್ಣ ತಿಪ್ಪಮ್ಮ. ಇವಳ ಅಕ್ಕ ದೊಡ್ಡ ತಿಪ್ಪಮ್ಮ, ಒಬ್ಬ ಅಣ್ಣ ಮತ್ತು ಒಬ್ಬಳು ತಂಗಿ, ಆಕೆಯದು ತುಂಬಿದ ಕುಟುಂಬವಾಗಿತ್ತು. ಈ ಕುಟುಂಬದಲ್ಲಿ ಬೆಳೆದ ಸಣ್ಣ ತಿಪ್ಪಮ್ಮ ತುಂಬಾ ಬುದ್ಧಿವಂತೆ ಈಕೆಯ ಮನೆಯ ಆರ್ಥಿಕ ಪರಿಸ್ಥಿತಿ ತುಂಬಾ ಗಂಭೀರವಾಗಿತ್ತು. ಹೊಲವಿರಲಿಲ್ಲ, ಒಂದು ಪುಟ್ಟ ಗುಡುಸಲು ಮಾತ್ರ ಇತ್ತು. ತಂದೆಗೆ ತಿಳುವಳಿಕೆ ಕಡಿಮೆ ಅರೆ ಹುಚ್ಚನಂತಿದ್ದನು. ತಾಯಿ ನಾಗಮ್ಮನೇ ಕುಟುಂಬದ ಜವಾಬ್ದಾರಿಯನ್ನು ವಹಿಸಿಕೊಂಡಿದ್ದಳು. ನಾಗಮ್ಮ ತನ್ನ ಮಕ್ಕಳನ್ನು ಸೇರಿಕೊಂಡು ಇಸ್ತ್ರಿಎಲೆಯಿಂದ ಊಟದ ಎಲೆ ಸಿದ್ಧಪಡಿಸುತ್ತಿದ್ದಳು. ಇದೇ ಅವರ ವೃತ್ತಿಯಾಗಿತ್ತು. ಇಸ್ತ್ರೀ ಎಲೆ ಸಿದ್ದಪಡಿಸಿ ಅಂಗಡಿಗಳಿಗೆ ಮಾರಾಟ ಮಾಡಿ, ಬಂದ ಹಣದಿಂದ ಜೀವನ ಸಾಗಿಸಬೇಕಾಗಿತ್ತು. ಇಸ್ತ್ರಿ ಎಲೆಯ ಬೆಲೆ ತುಂಬಾ ಕಡಿಮೆ. ಒಂದು ನೂರು ಎಲೆ ಸಿದ್ದಪಡಿಸಿದರೆ ಇಂತಿಷ್ಟು ಹಣ ಎಂದು ಕೊಡುತ್ತಿದ್ದರು. ಈ ಹಣ ಒಬ್ಬನ ಕೂಲಿಗಿಂತ ಕಡಿಮೆ ಇರುತ್ತಿತ್ತು. ಊಟಕ್ಕೆ ಮತ್ತು ಬಟ್ಟೆಗೆ ಈ ಹಣ ಸಾಲುತ್ತಿರಲಿಲ್ಲ. ನಾಗಮ್ಮನ ತಂಗಿ ಹುಲಿಗೆಮ್ಮ ಸ್ವಲ್ಪ ಸಹಾಯ ಮಾಡುತ್ತಿದ್ದಳು. ಹಾಗೆಯೆ ಇವರಿಂದ ಕೆಲಸವನ್ನು ಮಾಡಿಸಿಕೊಳ್ಳುತ್ತಿದ್ದಳು. ಹುಲಿಗೆಮ್ಮ ದೇವದಾಸಿ ಮತ್ತು ತರಕಾರಿ ವ್ಯಾಪಾರ ಮಾಡುತ್ತಿದ್ದಳು ದಿನಾಲು ನಾಗಮ್ಮಳಿಗೆ ಮಾರಲು ತರಕಾರಿ ಕೊಡುತ್ತಿದ್ದಳು. ಅದನ್ನು ನಾಗಮ್ಮ ಊರಲೆಲ್ಲಾ ತಿರುಗುತ್ತ ಮನೆ ಮನೆಗೆ ಹೋಗಿ ತರಕಾರಿ ಮಾರಾಟ

ಮಾಡುತ್ತಿದ್ದಳು. ಕೂಡ್ಲಿಗಿಯಲ್ಲಿ ಆಗ ಬದುಕಿದ್ದ ಕಲಾವಿದೆ ದೊಡ್ಡ ಚೌಡಮ್ಮ ಬೇಡರ ಸಮುದಾಯದವಳು. ಈಕೆ ಬಯಲಾಟದ ರಂಗ ನಟಿಯಾಗಿದ್ದಳು. ಇವಳು ಪ್ರತಿ ದಿನ ಸಂಗೀತ ಅಭ್ಯಾಸ ಮಾಡುತ್ತಿದ್ದಳು. ನಾಗಮ್ಮ ತರಕಾರಿ ಮಾರಾಟ ಮಾಡುವಾಗ ಚೌಡಮ್ಮನ ಮನೆಗೆ ಹೋದಳು. ಚೌಡಮ್ಮನ ಸಂಗೀತ ಅಭ್ಯಾಸ ಮಾಡುವುದನ್ನು ನೋಡಿ ತನ್ನ ಮಗಳಿಗೆ ಸಂಗೀತ ಕಲಿಸಬೇಕೆಂದು ಚೌಡಮ್ಮನನ್ನು ಕೇಳಿಕೊಂಡಳು. ಅದಕ್ಕೆ ಅವಳು ಒಪ್ಪಿ ಕಲಿಸುತ್ತೇನೆಂದು ಹೇಳಿದಳು. ಸಣ್ಣತಿಪ್ಪಮ್ಮ ಕಷ್ಟದ ಕಾಲದಲ್ಲಿ ಎರಡುಮೂರನೇ ತರಗತಿಯವರೆಗೆ ಓದಿದ್ದಳು. ತನ್ನ ಹೆಸರನ್ನು ಮಾತ್ರ ಬರೆಯುತ್ತಿದ್ದಳು. ಇವಳಿಗೆ ಸಂಗೀತವೆಂದರೆ ಬಹಳ ಇಷ್ಟ, ಇವಳನ್ನು ಚೌಡಮ್ಮನ ಹತ್ತಿರ ಸಂಗೀತ ಕಲಿಯುವುದಕ್ಕೆ ಬಿಟ್ಟಳು. ಚೌಡಮ್ಮ ಸಣ್ಣತಿಪ್ಪಮ್ಮಳಿಗೆ ಸಂಗೀತ ಮತ್ತು ಅಭಿನಯ ಕಲೆಯನ್ನೂ ಸಹ ಹೇಳಿಕೊಡುತ್ತಿದ್ದಳು. ಜೊತೆಗೆ ನಾಟಕಗಳಲ್ಲಿ ಅಭಿನಯಿಸುವುದಕ್ಕೆ ಕರೆದುಕೊಂಡು ಹೋಗುತ್ತಿದ್ದಳು. ಜೊತೆಯಲ್ಲಿಟ್ಟುಕೊಂಡು ಸಂಗೀತ ಮತ್ತು ಅಭಿನಯ ಕಲೆ ಕಲಿಸುತ್ತಿದ್ದಳು. ನಾಟಕಗಳಲ್ಲಿ ಚಿಕ್ಕ ಚಿಕ್ಕ ಪಾತ್ರಗಳ ಅವಕಾಶ ದೊರೆತವು, ಈ ಅವಕಾಶಗಳನ್ನು ಉಪಯೋಗಿಸಿಕೊಂಡು ಸಣ್ಣ ತಿಪ್ಪಮ್ಮ ದೊಡ್ಡ ಕಲಾವಿದೆಯಾದಳು. ಹಲವಾರು ನಾಟಕಗಳಲ್ಲಿ ಮುಖ್ಯ ಪಾತ್ರಗಳಲ್ಲಿ ಕಾಣಿಸಿಕೊಂಡಳು.

| ನಾಟಕದ ಹೆಸರು | | ಅಭಿನಯಿಸಿದ ಪಾತ್ರ |
|---|---|---|
| ೧. ರಕ್ತರಾತ್ರಿ | -- | ದ್ರೌಪತಿ |
| ೨. ಗಿರಿಜಾ ಕಲ್ಯಾಣ | -- | ರತಿ |
| ೩. ಬಬ್ರುವಾಹನ | -- | ಚಿತ್ರಾಂಗದೆ |
| ೪. ಶ್ರೀಕೃಷ್ಣಾರ್ಜುನ ಯುದ್ಧ | -- | ದ್ರೌಪದಿ |
| ೫. ರಾಮಾಂಜನಯ್ಯ ಯುದ್ಧ | -- | ಸೀತೆ |
| ೬. ರಾಮಾಯಣ | -- | ಸೀತೆ |
| ೭. ಸತಿ ಸುಮತಿ | -- | ಸುಮತಿಯ |
| ೮. ಗೆಜ್ಜೆಪೂಜೆ | -- | ನಾಯಕಿ |
| ೯. ಭೀಮ ದುರ್ಯೋಧನ ಕಾಳಗ | -- | ಗಾಂಧಾರಿ ಅಥವಾ ಕುಂತಿ |
| ೧೦ ಸಂಗ್ಯಾಬಾಳ್ಯಾ | -- | ನಾಯಕಿ |
| ೧೧. ಶ್ರೀಕೃಷ್ಣ ಪಾರಿಜಾತ | -- | ರುಕ್ಮಿಣಿ, ಸತ್ಯಭಾಮ |
| ೧೨. ಹೇಮರೆಡ್ಡಿ ಮಲ್ಲಮ್ಮ | -- | ಹೇಮರೆಡ್ಡಿ ಮಲ್ಲಮ್ಮ |
| ೧೩. ಲವ ಕುಶರ ವಿಜಯ | -- | ಸೀತೆ |

ಹಾಗೂ ಹಲವು ಸಾಮಾಜಿಕ ನಾಟಕಗಳಲ್ಲಿ ವಿಭಿನ್ನ ಪಾತ್ರಗಳನ್ನು ಮಾಡಿದ್ದಾರೆ.

ಇವರು ಹೆಚ್ಚು ಹಿರಿಯ ಪಾತ್ರಗಳನ್ನು ಮಾಡಿದ್ದಾರೆ. ತುಂಬ ಚಿಕ್ಕ ವಯಸ್ಸಿನಲ್ಲಿ ರಂಗಭೂವಿಗೆ ಪ್ರವೇಶ ಮಾಡಿರುವುದರಿಂದ ತುಂಬ ಅನುಭವ ಪಡೆದುಕೊಂಡಿದ್ದರು. ಇವರು ಎಂದೂ ಹಾಸ್ಯಪಾತ್ರ ಮಾಡಿಲ್ಲ. ನಾಟಕಗಳಲ್ಲಿ ಅಭಿನಯಿಸುವಾಗ ಮೈಕಿನ ಸಹಾಯವಿಲ್ಲದೆ ದೊಡ್ಡ ಧ್ವನಿಯಲ್ಲಿ ಹಾಡುತ್ತಿದ್ದಳು ಎಂದು ಕೇಳಿದವರು ಹೇಳುತ್ತಾರೆ. ತಿಪ್ಪಮ್ಮ ರಂಗಭೂಮಿಗೆ ಬರುವುದು ಅನಿವಾರ್ಯವಾಗಿತ್ತು. ಮನೆ ಆರ್ಥಿಕ ಪರಿಸ್ಥಿತಿ ಒಂದು ಕಾರಣವಾದರೆ, ಮತ್ತೊಂದು ಕಾರಣ ಡೊಂಬರ ಸಮುದಾಯದ ಮಹಿಳೆಯರು ಜನಪದ ಸಂಗೀತ, ನೃತ್ಯ ಮತ್ತು ಕಲಾಪ್ರದರ್ಶನದಲ್ಲಿ ಪರಿಣಿತಿ ಹೊಂದಿದವರಾಗಿದ್ದರು. ಈ ಪರಂಪರೆಯನ್ನು ಮೈಗೂಡಿಸಿಕೊಂಡ ಸಣ್ಣತಿಪ್ಪಮ್ಮ ರಂಗಭೂಮಿಗೆ ಪ್ರವೇಶ ಮಾಡಿದಳು. ಸ್ವಾತಂತ್ರ ಪೂರ್ವದಲ್ಲಿ ರಂಗಭೂಮಿಯಲ್ಲಿ ಸ್ತ್ರೀಯರು ಭಾಗವಹಿಸುವುದು ತುಂಬ ಕಡಿಮೆ, ಅದರಲ್ಲೂ ರಂಗಭೂಮಿಯಲ್ಲಿ ಸ್ತ್ರೀಪಾತ್ರ ಸ್ತ್ರೀಯರು ವಹಿಸುವುದು ಅವಶ್ಯವಾಗಿತ್ತು. ರಂಗಭೂಮಿಯಲ್ಲಿ ಸ್ತ್ರೀಯರ ರಂಗಪ್ರವೇಶ ಅತ್ಯಗತ್ಯವಾಗಿತ್ತು. ಇಂಥ ಸಂದರ್ಭದಲ್ಲಿ ಕೆಳಜಾತಿಯ ಸ್ತ್ರೀಯರು ಈ ಒಂದು ಅವಕಾಶ ಉಪಯೋಗಿಸಿಕೊಂಡು, ರಂಗಭೂಮಿಗೆ ಪ್ರವೇಶ ಮಾಡಿದರು.

ತಿಪ್ಪಮ್ಮ ರಂಗಭೂಮಿಗೆ ಪ್ರವೇಶ ಮಾಡಿದ್ದು ೧೨ನೇ ವಯಸ್ಸಿನಲ್ಲಿಯ ಚಿಕ್ಕ ವಯಸ್ಸಿನಲ್ಲಿಯೇ ರಂಗಭೂಮಿಗೆ ಪ್ರವೇಶ ಮಾಡಿದಳು. ಚಿಕ್ಕ ಪುಟ್ಟ ಸುಮಾರು ೧೦೦-೧೫೦ ನಾಟಕಗಳಲ್ಲಿ ಅಭಿನಯಿಸಿದ್ದಾಳೆ. ಕೆಲವು ನಾಟಕ ಕಂಪನಿಗಳಲ್ಲೂ ಕೆಲಸ ಮಾಡಿದ್ದಾಳೆ. ಕಂಪನಿಗಳಲ್ಲಿ ಒಂದು ಆಟಕ್ಕೆ ೪೦ ರೂಪಾಯಿಗಳು ಕೊಡುತ್ತಿದ್ದರಂತೆ. ಒಂದು ಸಲ ನಾಟಕ ಚೆನ್ನಾಗಿ ಆಡಿಲ್ಲವೆಂದು ೨೫ ಅಥವಾ ೩೦ ರೂಪಾಯಿಗಳನ್ನು ಕೊಡುತ್ತಿದ್ದರಂತೆ. ತಿಪ್ಪಮ್ಮ ಚಿಕ್ಕ ವಯಸ್ಸಿನಲ್ಲಿ ರಂಗಭೂಮಿಗೆ ಪ್ರವೇಶ ಮಾಡಿದ್ದರಿಂದ ಇವಳಿಗೆ ಮದುವೆಯಾಗಲಿಲ್ಲ. ಏಕೆಂದರೆ ಕಲಾವಿದೆಯನ್ನು ಸಮಾಜ ವೇಶ್ಯಯರನ್ನು ನೋಡುವ ದೃಷ್ಟಿಯಲ್ಲಿ ನೋಡುತ್ತದೆ. ಹಾಗಾಗಿ ತಿಪ್ಪಮ್ಮ ಮದುವೆ ಆಗಲಿಲ್ಲ. ಅದಕ್ಕೆ ಇವರ ಸಮುದಾಯದಲ್ಲಿ ಎಲ್ಲಮ್ಮ ದೇವರ ಆರಾಧನೆ ಹೆಚ್ಚು ಎಲ್ಲಮ್ಮನ ದೇವರ ಹೆಸರಿನಲ್ಲಿ ಹೆಣ್ಣು ಮಕ್ಕಳನ್ನು ಅರ್ಪಿಸುತ್ತಾರೆ. ಅಂದರೆ ಮುತ್ತು ಕಟ್ಟಿಸುತ್ತಾರೆ ಅದೇ ರೀತಿಯಲ್ಲಿ ಸಣ್ಣತಿಪ್ಪಮ್ಮಳಿಗೆ ಮತ್ತು ಇವಳ ಅಕ್ಕನಿಗೆ ಇಬ್ಬರಿಗೂ ಕೂಡಿ ಮುತ್ತು ಕಟ್ಟಿಸಿದರು. ಮುತ್ತು ಕಟ್ಟಿಸುವುದು ಎಂದರೆ ದೇವದಾಸಿ ಪದ್ಧತಿಗೆ ಹೆಣ್ಣನ್ನು ನಿಯುಕ್ತಿಗೊಳಿಸುವ ಆಚರಣೆಯೇ ಆಗಿದೆ. ಸಣ್ಣತಿಪ್ಪಮ್ಮಳು ಮೇಲ್ಜಾತಿಯ ಪುರುಷನನ್ನು ಸ್ವೀಕರಿಸಿದಳು. ಇವಳಿಗೆ ಮಕ್ಕಲಾಗಲಿಲ್ಲ, ಅಕ್ಕನ ಮಕ್ಕಳನ್ನು ಸಾಕಿದಳು.

ತಿಪ್ಪಮ್ಮ ಕಲಾವಿದೆಯ ಬದುಕಿಗೆ ಅರ್ಪಿಸಿಕೊಂಡ ನಂತರ ಕಲಾವಿದೆಯಾಗಿ ಸಮಾಜದಲ್ಲಿ ಮುಂದುವರೆಯಲು ಸ್ವಲ್ಪ ಮಟ್ಟಿಗೆ ಸ್ವಾತಂತ್ರವೇನು ಸಿಕ್ಕಿತು. ನಿಜ ಇದನ್ನೇ ಸದುಪಯೋಗ ಪಡಿಸಿಕೊಂಡು ಕಲಾರಂಗದಲ್ಲಿ ಬೆಳೆದು ಮನೆಯಲ್ಲಿ ತನ್ನ ಅವಲಂಬಿತ ಕುಟುಂಬವನ್ನ ಸಾಕಿ ಸಲುಹುದರ

ಹೊಣೆ ಹೊತ್ತಳು. ಕಲಾವಿದೆಯಾಗಿ ಬೆಳೆದರೂ ಸಮಾಜಿಕ ಅವಮಾನಗಳು ತಪ್ಪಲಿಲ್ಲ. ದೇವದಾಸಿಯರಾದ ಇವರು ಒಬ್ಬ ಸಂಗಾತಿಗೆ ನಿಷ್ಠರಾಗಿರುತ್ತಾರೆ. ಆದರೆ ಗಂಡಸರ ನಿಷ್ಠೆ ಇಬ್ಬರು ಮೂವರಲ್ಲಿ ಹಂಚಿ ಹೋಗುತ್ತದೆ. ಪಾಲಿಗೆ ಬಂದದೇ ಪಂಚಾಮೃತ ಸಿಕ್ಕಷ್ಟೇ ಸುಖವನ್ನು ಸ್ವೀಕರಿಸಬೇಕು. ಗಂಡನಿಂದ ತಾಳಿ ಕಟ್ಟಿಸಿಕೊಂಡವರು ಮರೆಯಲ್ಲಿ ಹೇಗಾದರೂ ಇರಲಿ, ಸಮಾಜದ ಕಣ್ಣಿಗೆ ಅವಳು ಧರ್ಮಪತ್ನಿ ದೇವದಾಸಿಯರಿಗೆ ಇತ್ತೀಚಿನ ದಿನಗಳಲ್ಲಿ ವೇಶ್ಯಯ ಪಟ್ಟ ಕಟ್ಟುತ್ತಾರೆ.

ಕಲಾವಿದೆಯರ ಜೀವನ ಹೂವಿನ ಹಾಸಿಗೆ ಆಗಿರುವುದಿಲ್ಲ, ಪ್ರತಿದಿನ ಹೊಸತಿನ ಅನುಭವ. ಆದರೆ ಕಲಾವಿದರು ಒಂದು ಊರಿನಿಂದ ಮತ್ತೊಂದು ಊರಿಗೆ ಹೋಗಬೇಕು. ಅಲ್ಲಿ ಇರುವ ಜನಗಳಿಗೆ ಹೊಂದಿಕೊಂಡು ಅವರಂತೆ ಕೇಳಬೇಕು. ಕೆಲವೊಂದು ಸಲ ಆಟವಾದ ನಂತರ ಅವರನ್ನು ಮರೆತು ಬಿಡುತ್ತಾರೆ. ಆದರೆ ಆಟ ಆದಮೇಲೆ ಕಲಾವಿದರಿಗೆ ಹಣ ಕೊಟ್ಟು ಕಳುಹಿಸಬೇಕು. ನಾಟಕ ಮುಗಿದ ನಂತರ ಅವರು ಎಷ್ಟು ಕೊಡುತ್ತಾರೋ, ಅಷ್ಟು ತೆಗೆದುಕೊಂಡು ಬರುವುದು ಅವರಿಗೆ ಅನಿವಾರ್ಯ. ಅವರು ಕೊಟ್ಟಷ್ಟನ್ನು ತೆಗೆದುಕೊಳ್ಳಲೇಬೇಕು. ಸಣ್ಣತಿಪ್ಪಮ್ಮ ಬಳ್ಳಾರಿ, ರಾಯಚೂರು ಕೊಪ್ಪಳ, ದಾವಣಗೆರೆ, ಚಿತ್ರದುರ್ಗ, ಅನಂತಪುರ, ಆದೋನಿ, ಗುಟ್ಟೂರು, ಕಡಪ, ನೆಲ್ಲೂರು, ಸುತ್ತಮುತ್ತ ಪ್ರದೇಶಗಳಿಗೆ ಹೋಗಿ ನಾಟಕಗಳಲ್ಲಿ ಅಭಿನಯ ಮಾಡಿದ್ದಾರೆ. ತಿಪ್ಪಮ್ಮ ಎಂದೂ ಹಾಸ್ಯ ಪಾತ್ರ ಮಾಡುತ್ತಿದುದು ಕಡಿಮೆ. ಹೆಚ್ಚಾಗಿ ಹಿರಿಯ ಪಾತ್ರಗಳನ್ನೇ ಮಾಡುತ್ತಿದ್ದಳು. ತಿಪ್ಪಮ್ಮಳಿಗೆ ಮಕ್ಕಳಿಲ್ಲದ ಕಾರಣ ಅಕ್ಕನ ಮಕ್ಕಳನ್ನು ಸಾಕಿದಳು ಅಣ್ಣನನ್ನು ಪೋಲಿಸ ಇಲಾಖೆಯಲ್ಲಿ ಸೇರುವಂತೆ ಮಾಡಿದ್ದಳು. ಹಾಗೂ ತಂಗಿಯನ್ನು ಸಂಡೂರಿಗೆ ಮದುವೆ ಮಾಡಿಕೊಟ್ಟಳು. ಹಾಗೂ ತನ್ನ ಆಸ್ತಿಯನ್ನು ಅಕ್ಕನ ಮಕ್ಕಳಿಗೆ ಕೊಟ್ಟಳು ಹಾಗೂ ಇಂಜಿನಿಯರಿಂಗ್ ಓದುವುದಕ್ಕೂ ಸಹಾಯ ಮಾಡಿದಳು.

ತಿಪ್ಪಮ್ಮಳಿಗೆ ಅನೇಕ ಪುರಸ್ಕಾರಗಳು ದೊರೆತಿವೆ. ಇವರಿಗೆ ಕಲಾವಿದೆ ಎಂದು ಗುರುತಿಸಿ ಕಲಾವಿದರ ವೇತನ ಬರುತ್ತಿತ್ತು. ಕುಡಿತದ ಚಟಕ್ಕೆ ಬಲಿಯಾಗಿ ಸಮಾರು ೬೫ ವರ್ಷ ಆಗಿತ್ತು. ೨೦೦೦ ಇಸ್ವಿಯಲ್ಲಿ ಈಕೆ ಮರಣ ಹೊಂದಿದರು. ಇವರ ಕುಟುಂಬದವರು ಇವಳ ಬಗ್ಗೆ ತುಂಬಾ ಹೆಮ್ಮೆ, ಮುಂದೆ ಇಂತಹ ಕಲಾವಿದೆಯನ್ನು ನೋಡುವುದಕ್ಕೆ ಅಸಾಧ್ಯ ಎಂದು ಹೇಳುತ್ತಾರೆ. ಈಕೆ ರಂಗಗೀತೆಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದಳಂತೆ. ಪ್ರತಿದಿನ ಸಂಗೀತ ಅಭ್ಯಾಸ ಮಾಡುತ್ತಿದ್ದಳಂತೆ. ಕಲೆಗೆ ತನ್ನನ್ನೇ ಅರ್ಪಿಸಿಕೊಂಡಿದ್ದಳು. ಎಂದು ಅವಳ ಜೊತೆ ಒಡಿನಾಡಿನವರು ಅಭಿಪ್ರಾಯ ಪಡುತ್ತಾರೆ. ಎಷ್ಟೋಸಲ ನಾಟಕ ಮಾಡುವಾಗ ಸಂಗೀತ ಮಾಸ್ತರ ತಪ್ಪು ಹೇಳಿದಾಗ, ಮಾಸ್ತರ ಜೊತೆ ಜಗಳ ಕಾಯುತ್ತಿದ್ದಳು. ಅಭಿನಯವನ್ನು ತುಂಬ ನಿಷ್ಠೆಯಿಂದ ಮಾಡುತ್ತಿದ್ದಳು. ಯಾವ ನಾಟಕದ ಭಾಗವನ್ನು ಕೇಳಿದರೂ ಹೇಳುತ್ತಿದ್ದಳಂತೆ, ಮತ್ತೆ ಇವರ

ಕುಟುಂಬದಲ್ಲಿ ಯಾರೂ ರಂಗಭೂಮಿಯನ್ನು ಪ್ರವೇಶ ಮಾಡಲಿಲ್ಲ. ಕಾರಣ ಅದು ರಂಗನಟಿಯರನ್ನು ಸಮಾಜ ನಡೆಸಿಕೊಳ್ಳುತ್ತಿದ್ದ ರೀತಿ. ಮೊದಲೇ ಕೆಳಜಾತಿಯಲ್ಲಿ ಹುಟ್ಟಿ ಸಾಮಾಜಿಕವಾಗಿ ಅನೇಕ ಅವಮಾನಗಳನ್ನು ಅನುಭವಿಸಿದ ಕಲಾವಿದೆಯರು, ರಂಗನಟಿಯರಾಗಿ ಅದೇ ಬಗೆಯ ಸಾಮಾಜಿಕ ಹಿಂಸೆಗಳನ್ನು ಅನುಭವಿಸಬೇಕಾಗುತ್ತದೆ. ಹೊಟ್ಟೆಪಾಡಿನ ಬದುಕೇ ದುಸ್ತರವಾಗಿ ಅಸಹಾಯಕತೆಯಿಂದ ತೊಳಲಾಡುವ ಈ ನಟಿಯರು ಮತ್ತೆ ಮತ್ತೆ ಅವಮಾನಗಳ ಚಿತ್ರಸುಳಿಯಲ್ಲಿ ನಲುಗಬೇಕಾಗುತ್ತದೆ. ಅದಕ್ಕೆ ಯಾವೊಬ್ಬ ರಂಗನಟಿಯೂ ತನ್ನ ಮಗಳನ್ನು ರಂಗನಟಿಯಾಗುವಂತೆ ಸಹಜವಾಗಿಯೇ ಪ್ರೋತ್ಸಾಹಿಸುವುದಿಲ್ಲ.

### ೧.೨. ಬಯಲಾಟದ ರಂಗನಟಿ ಶ್ರೀಮತಿ ಗೌರಮ್ಮ

ಯಾವುದೇ ಒಂದು ಸಮುದಾಯ ಮತ್ತು ದೇಶ ಮುಂದುವರಿಯುವುದಕ್ಕೆ ಹಾಗೂ ಹಿಂದುಳಿಯುವುದಕ್ಕೆ ಆರ್ಥಿಕ ಪರಿಸ್ಥಿತಿಯೇ ಮುಖ್ಯ ಕಾರಣವಾಗಿರುತ್ತದೆ. ಅದೇ ರೀತಿಯಲ್ಲಿ ಪ್ರತಿಯೊಬ್ಬ ವ್ಯಕ್ತಿಯ ಜೀವನದಲ್ಲಿ ಆರ್ಥಿಕ ಪರಿಸ್ಥಿತಿಯೇ ಮುಖ್ಯ ಪಾತ್ರವಹಿಸುತ್ತದೆ. ಕೆಳಜಾತಿಯ ಮಹಿಳೆಯರು ರಂಗನಟಿಯಾಗಿ ರೂಪವುಳ್ಳವರಾಗಿರುವುದಕ್ಕೆ ಅವರ ಸಮುದಾಯದ ಜೈವಿಕ ಹಿನ್ನೆಲೆ ಕಾರಣವಾದಂತೆ, ಅವರ ಸಾಮಾಜಿಕ, ಆರ್ಥಿಕ ಪರಿಸ್ಥಿತಿಗಳಲ್ಲಿ ಕೆಲಸ ಮಾಡಿರುತ್ತವೆ.

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಡೊಂಬರ ಸಮುದಾಯದ ಮಹಿಳೆಯಾದ ಶ್ರೀಮತಿ ಗೌರಮ್ಮ, ಬಯಲಾಟ ರಂಗಭೂಮಿಯ ಕಲಾವಿದೆ. ಆರ್ಥಿಕ, ಸಾಮಾಜಿಕ ಕಾರಣದಿಂದಾಗಿ ರಂಗಭೂಮಿ ಯನ್ನು ಪ್ರವೇಶ ಮಾಡಿದವಳು. ಇವಳ ತಂದೆ ತಾಯಪ್ಪ, ತಾಯಿ ಗಂಗಮ್ಮ ಇವರಿಗೆ ೧೯೪೮ರಲ್ಲಿ ಜನಿಸಿದ ಮಗುವೇ ಶ್ರೀಮತಿ ಗೌರಮ್ಮ. ಇವಳಿಗೆ ಒಬ್ಬ ಅಣ್ಣ ಮತ್ತು ಮೂರು ತಂಗಿಯರು ಹಾಗೂ ಒಬ್ಬ ತಮ್ಮ. ತುಂಬಾ ದೊಡ್ಡ ಕುಟುಂಬ. ತಂದೆಗೆ ತುಂಬಾ ವಯಸ್ಸಾಗಿತ್ತು. ಇವಳ ತಾಯಿ ಎರಡನೇ ಹೆಂಡತಿಯಾಗಿದ್ದಳು. ತಾಯಪ್ಪ ಗೌಡರ ಬಸವಣ್ಣಗೌಡರು ಮನೆಯಲ್ಲಿ ಕೆಲಸ ಮಾಡುತ್ತಿದ್ದರು. ಇವಳ ತಾಯಿ ಸಹ ಅವರ ಮನೆಯಲ್ಲಿ ಕೆಲಸಮಾಡುತ್ತಿದ್ದಳು. ಹೊಲ, ಮನೆಯಲ್ಲಿ ಒಂದು ಪುಟ್ಟಗುಡಿಸಲಿನಲ್ಲಿ ಬೆಳೆದರು. ಅಣ್ಣ ಮದುವೆ ಜವಾಬ್ದಾರಿಯನ್ನು ಹೋರಲಿಲ್ಲ. ಗೌರಮ್ಮ ತುಂಬ ಚಿಕ್ಕವಳು. ಇವಳು ದೊಡ್ಡವಳಾದ ಮೇಲೆ ಮದುವೆ ಮಾಡಬೇಕು ಎಂದು ಇವರ ಸಮುದಾಯದ ಒಂದು ಹುಡುಗನನ್ನು ಗೊತ್ತು ಮಾಡಿದರು. ಮದುವೆ ನಿಶ್ಚಿತವಾದ ಮೇಲೆ ಗಂಡಿನ ಕಡೆಯವರು ಊಟಕ್ಕೆ ಬಂದಾಗ ಗೌರಮ್ಮನ ಮನೆಯವರು ಬಡವರಾಗಿದ್ದರಿಂದ, ಗಂಡಿನ ಕಡೆಯವರಿಗೆ ವಿಶೇಷ ಉಪಚಾರ ಮಾಡಲಾಗಲಿಲ್ಲ. ಆಗ ಇದನ್ನೇ ದೊಡ್ಡ ಮಾಡಿ, ಇಂಥವರ ಮನೆಯಲ್ಲಿ ಮದುವೆ ಮಾಡಿಕೊಳ್ಳುವುದಿಲ್ಲ ಎಂದು ಹೇಳಿಹೋದರು.

ನಂತರ ಆಂದ್ರದಿಂದ ವರ ನೋಡಿ ಕರೆತಂದರು ಕನ್ಯೆ ನೋಡುವುದಕ್ಕೆ ಇವರ ಮನೆಗೆ ಬಂದರು. ಇವರ ಮನೆಯನ್ನು ನೋಡಿ "ಪೆದ್ದಾಡು ಇಟ್ಟಿಲ್ಲೂ ಪೆಳ್ಳಿ ಚೆಸ್‌ಕೊನು" ಆದರೆ ಬಡವರ ಮನೆಯಲ್ಲಿ ಮದುವೆಯಾಗಬಾರದು ಎಂದು ಹೇಳಿ ಹೋದರು. ಇದನ್ನು ಕೇಳಿಸಿಕೊಂಡ ಗೌರಮ್ಮ ನನಗೆ ಮದುವೆ ಬೇಡ ಎಂದು ಹಠಹಿಡಿದಳು. ಈ ಸಮುದಾಯದ ಹಿರಿಯರು ದೇವದಾಸಿ ಮಾಡುವುದಕ್ಕೆ ಸಲಹೆ ನೀಡಿದರು. ಅದಕ್ಕೆ ಗೌರಮ್ಮ ಒಪ್ಪಲಿಲ್ಲ, ನಿರಾಕರಿಸಿದಳು. ಸೆರಗು ಹಾಸುವುದಕ್ಕಿಂತ ದುಡಿಯುವುದೇ ಮೇಲು ಎಂದು ಈ ರಂಗಭೂಮಿಗೆ ಪ್ರವೇಶ ಮಾಡಿದಳು. ಇವಳ ಸಮುದಾಯದ ಸಣ್ಣತಿಪ್ಪಮ್ಮ ರಂಗಭೂಮಿಯ ಕಲಾವಿದೆ. ಈಕೆ ಗೌರಮ್ಮ ರಂಗಭೂಮಿಗೆ ಪ್ರವೇಶ ಮಾಡುವುದಕ್ಕೆ ಮಾರ್ಗದರ್ಶಕಿ ಯಾದಳು. ಮಾಡಲು ಬೇರೆ ಕೆಲಸವಿಲ್ಲ, ಜಮೀನಿಲ್ಲ, ವಾಸಿಸಲು ಮನೆಯಿಲ್ಲ. ಕೂಲಿಗೆ ಹೋದರೆ ಕೂಲಿ ತುಂಬಾ ಕಡಿಮೆ. ದೊಡ್ಡ ಕುಟುಂಬ, ಅಷ್ಟಕ್ಕೂ ತಂದೆ ತಾಯಿ ಬಡವರಾದರೂ ಹೊರಗಡೆ ಕಳಿಸಿರಲಿಲ್ಲ. ಮನೆಯಲ್ಲಿ ಮಾತ್ರ ಕೆಲಸ ಮಾಡುತ್ತಿದ್ದಳು. ತಂಗಿ ಮತ್ತು ತಮ್ಮನನ್ನು ನೋಡಿಕೊಂಡು ಹೋಗುತ್ತಿದ್ದಳು. ಇಂಥ ಸಂದರ್ಭ ಅನಿವಾರ್ಯವಾದ ಪರಿಸ್ಥಿತಿಯಲ್ಲಿ ತಾನೆ ಈ ನಿರ್ಧಾರವನ್ನು ತೆಗೆದುಕೊಂಡಳು. ಅವಳ ತಂದೆ ತಾಯಿಗೆ ಯಾರಿಗೂ ಹೇಳಲಿಲ್ಲ. ತಾನೇ ಈ ಒಂದು ವೃತ್ತಿಯನ್ನು ಆಯ್ದುಕೊಂಡಳು. ಇದೇ ಸಮುದಾಯದ ಕಲಾವಿದೆ ಸಣ್ಣ ತಿಪ್ಪಮ್ಮ ಇವಳಿಗೆ ಗುರುವಾದಳು. ಗೌರಮ್ಮನಿಗೆ ಬರೆಯುವುದಕ್ಕೆ, ಓದುವುದಕ್ಕೆ ಬರುತ್ತಿರಲಿಲ್ಲ. ಮನೆಯಲ್ಲಿ ತುಂಬ ಕಷ್ಟ ಇರುವುದರಿಂದ ಶಾಲೆಗೆ ಸಹ ಹೋಗಿರಲಿಲ್ಲ. ಗೌರಮ್ಮ ತುಂಬ ಬುದ್ಧಿವಂತೆ, ಹಾಗೂ ತುಂಬ ಜಾಣೆ.

ತಿಪ್ಪಮ್ಮ ವಿದ್ಯೆ ಇಲ್ಲದವರಿಗೆ ಸಂಗೀತ ಹೇಳಿಕೊಡುವುದು ತುಂಬಾ ಕಷ್ಟ ಏಕೆಂದರೆ ಬರೆಯುವುದಕ್ಕೆ ಬರುವುದಿಲ್ಲ ಓದುವುದಕ್ಕೆ ಬರುವುದಿಲ್ಲವೆಂದು ಹೇಳಿದಳು. ಆದರೆ ಗೌರಮ್ಮ ಹಠಹಿಡಿದು ಕಲಿತುಕೊಂಡಳು. ಸಂಗೀತವನ್ನು ಪ್ರತಿದಿನ ಅಭ್ಯಾಸ ಮಾಡಿದಳು. ಹಾಡುಗಳನ್ನು ಮತ್ತು ಪದ್ಯಗಳನ್ನು ಕಂಠಪಾಠ ಹಾಕಿಕೊಂಡು ನೆನಪಿಟ್ಟುಕೊಂಡು ಹಾಡುತ್ತಿದ್ದಳು. ಇವಳು ಕೇವಲ ಪೌರಾಣಿಕ ಬಯಲಾಟಗಳಲ್ಲಿ ಮಾತ್ರ ಅಭಿನಯಿಸಿದ್ದಾರೆ. ಚಿಕ್ಕ ಪಾತ್ರದಿಂದ ದೊಡ್ಡ ಪಾತ್ರದವರಿಗೆ ಮಾಡಿದ್ದಾಳೆ. ಗೌರಮ್ಮ ಸುಮಾರು ೧೫ ವರ್ಷಗಳ ಕಾಲ ಅಭಿನಯಿಸಿದ್ದಾಳೆ. ಸಾಮಾಜಿಕ ನಾಟಕಗಳಲ್ಲಿ ಈಕೆ ಹೆಚ್ಚು ನಟಿಸಲಿಲ್ಲ.

| ನಾಟಕ ಹೆಸರು | | ಅಭಿನಯಿಸಿದ ಪಾತ್ರ |
|---|---|---|
| ೧. ಗಿರಿಜ ಕಲ್ಯಾಣ | -- | ಗಿರಿಜ, ರತಿ |
| ೨. ರಕ್ತರಾತ್ರಿ | -- | ದ್ರೌಪತಿ |
| ೩. ಬಬ್ರುವಾಹನ | -- | ಚಿತ್ರಾಂಗದೆ |

೪. ಶಶಿರೇಖಾ ಕಲ್ಯಾಣ -- ಸುಭದ್ರ

೫. ಶ್ರೀಕೃಷ್ಣಾರ್ಜುನ ಯುದ್ಧ -- ಸುಭದ್ರ

೬. ರಾಮಾಂಜನೇಯ್ಯ ಯುದ್ಧ -- ಸೀತೆ

೭. ರಾಮಾಯಣ -- ಸೀತೆ

೮. ಲವಕುಶರ ವಿಜಯ -- ಸೀತೆ

೯. ಗೆಜ್ಜೆಪೂಜೆ -- ನಾಯಕಿ

೯. ಭೀಮ ದುರ್ಯೋಧನ ಕಾಳಗ -- ಗಾಂಧಾರಿ ಅಥವಾ ಕುಂತಿ

ಹೀಗೆ ಇವರು ಹಲವಾರು ಪಾತ್ರಗಳಲ್ಲಿ ಅಭಿನಯ ನೀಡಿದ್ದಾರೆ. ಇವರು ಹಾಸ್ಯಪಾತ್ರಗಳನ್ನು ಮಾಡಿಲ್ಲ.

ಸುಮಾರು ಎಂಟು ವರ್ಷಗಳ ಕಾಲ ಮದುವೆಯಿಲ್ಲದೆ ಅಭಿನಯಿಸಿದ್ದರು ಹಾಗೂ ಯಾರ ಜೊತೆಯೂ ದೈಹಿಕ ಸಂಭಂದವೂ ಸಹ ಇರಲಿಲ್ಲ. ಆದರೆ ಸಮಾಜ ಮತ್ತು ಸಮುದಾಯದವರು ದೋಷಿಯಂತೆ ಕಾಣುತ್ತಿದ್ದರು. ಇಂಥ ಪರಿಸ್ಥಿತಿಯಲ್ಲಿ ಅವಳ ತಾಯಿ ತವರು ಮನೆಗೆ ಕರೆದುಕೊಂಡು ಹೋಗಿ ಅನಿವಾರ್ಯ ಪರಿಸ್ಥಿತಿಯಲ್ಲಿ ದೇವರು ಹೋರಿಸಿದರು ಇವರ ಮನೆದೇವರು ಕೋತ್ಲದಯ್ಯ. ಈ ದೇವರಿಗೆ ಗೌರಮ್ಮನನ್ನು ಬಿಟ್ಟರು. ಗೌರಮ್ಮ ತನ್ನ ಜೀವನದಲ್ಲಿ ಸ್ವೀಕರಿಸಿದ ವ್ಯಕ್ತಿ ಮೇಲ್ಜಾತಿಯವನು. ಈತ ಗಂಡನಂತೆ ನೆಡೆದುಕೊಂಡನು. ಈತ ಸತ್ತ ನಂತರ ಗೌರಮ್ಮ ತನ್ನ ತಾಳಿಯನ್ನು ತೆಗೆದಿದ್ದಾರೆ. ತನ್ನ ಸಮುದಾಯದವರು ಯಾವುದೇ ಕಾರ್ಯಕ್ಕೆ ಕರೆಯುತ್ತಾರೆ ದೇವದಾಸಿಯರು ನಿತ್ಯ ಮುತ್ತೈದೆಯರು ಎಂದು ಮೊದಲು ಅವರಿಗೆ ಅರಿಶಿಣ ಕುಂಕುಮ ಕೊಡುತ್ತಾರೆ. ಗೌರಮ್ಮ ತಾಳಿ ಮಾತ್ರ ತೆಗೆದಿದ್ದಾರೆ. ಆದರೆ ಅರಶಿಣ ಕುಂಕುಮ ಬಳೆ, ಹೂಮುಡಿಯುತ್ತಾರೆ. ಇವರ ಜೀವನದಲ್ಲಿ ಇವರ ಸಮುದಾಯದವರೆ ಇವರಿಗೆ ತೊಂದರೆ ಮಾಡಿದ್ದಾರೆ. ಕುಲ ಕುಲಕ್ಕೆ ಶತ್ರು ಎನ್ನುವಂತೆ ಇವಳು ಸೂಳೆ ಎನ್ನುವ ದೃಷ್ಟಿಯಿಂದ ನೋಡಿದ್ದಾರೆ. ಇವಳ ಕುಟುಂಬವನ್ನು ಸಮುದಾಯದಿಂದ ಹೊರಹಾಕಲಾಗಿತ್ತು. ಯಾವುದೇ ಕಾರ್ಯಕ್ಕೆ ಅಥವಾ ಮದುವೆಗೆ ಇವರನ್ನು ಕರೆಯುತ್ತಿರಲಿಲ್ಲ. ಅಷ್ಟಕ್ಕೂ ಇವರು ಕೂಡ ಹೋಗುತ್ತಿರಲಿಲ್ಲ. ಹಾಗೆ ಅವಳು ತಮ್ಮ ದೊಡ್ಡವನಾಗುವವರೆಗೆ ಜೀವನ ಮಾಡಿದರು. ತಮ್ಮ ಕೈಗೆ ಬಂದ ಮೇಲೆ ಆರ್ಥಿಕವಾಗಿ ಸುಧಾರಿಸಿದರು. ಈ ವ್ಯವಸ್ಥೆಯನ್ನು ಕೈಬಿಟ್ಟರು. ಹೊಲಮನೆ ಕೊಂಡರು. ಅವಳು ತಮ್ಮ ಗೌರಮ್ಮನನ್ನು ನಾಟಕದಲ್ಲಿ ಅಭಿನಯಿಸುವುದನ್ನು ಬಿಡಿಸಿದರು. ತಂದೆಯ ಗೌಡರ ಮನೆಯ ಜೀತ ಬಿಡಿಸಿ ಬೇರೆ ಹೊಲಗಳನ್ನು ಕೋರಿಗೆ ತೆಗೆದುಕೊಂಡು ದುಡಿದರು. ಚಿಕ್ಕವಯಸ್ಸಿನಲ್ಲೆ ಸ್ವಂತ ಹೊಲ ಮಾಡಿದರು. ಬಂಜರು ಭೂಮಿಯನ್ನೇ ಉತ್ತು ಹೊಲ ಮಾಡಿಕೊಂಡರು. ಆಗ ಇವರ ಸಮುದಾಯದವರು ಇವರನ್ನು

ಜಾತಿಗೆ ಸೇರಿಸಿಕೊಂಡರು. ಶ್ರೀಮತಿ ಗೌರಮ್ಮನನ್ನು ಈಗ ಸಮಾಜ ಗೌರವದಿಂದ ಕಾಣುತ್ತಿದೆ. ನನ್ನ ಸಮುದಾಯದವರು ಮಾತ್ರ ನನ್ನನ್ನು ಕೀಳುಭಾವನೆಯಿಂದ ಕಂಡಿದ್ದಾರೆ. ನನ್ನ ಜೀವನದ ಬಗ್ಗೆ ನನಗೆ ಹೆಮ್ಮೆ ಇದೆ, ತೃಪ್ತಿ ಇದೆ, ನನ್ನ ಜೀವನವನ್ನು ನಾನು ಸವಾಲೆಂದೇ ತೆಗೆದುಕೊಂಡೆ ಅದೇ ರೀತಿಯಲ್ಲಿ ಬದುಕಿದೆ. ಅದೇ ರೀತಿ ಕುಟುಂಬದವರು ಸಹಕಾರ ನೀಡಿದರು ಮತ್ತು ಕುಟುಂಬವನ್ನು ನಾನು ಸಾಕಿದ್ದೇನೆ ಅದೇ ರೀತಿಯಾಗಿ ನನ್ನ ತಂಗಿಯರು ಮತ್ತು ತಮ್ಮ ನಡೆದುಕೊಂಡು ಬಂದಿದ್ದಾರೆ ಎಂದು ಬಿಚ್ಚುಮನಸ್ಸಿನಿಂದ ಗೌರಮ್ಮ ಮಾತನಾಡಿದರು. ಗೌರಮ್ಮ ತನ್ನ ಕುಟುಂಬದ ಆರ್ಥಿಕ ಮಟ್ಟವನ್ನು ಸುಧಾರಿಸಲು ರಂಗಪ್ರವೇಶ ಮಾಡಿದರು. ಇದರಿಂದಾಗಿ ಮತ್ತೆ ಮತ್ತೆ ತನ್ನ ಸಮುದಾಯದಿಂದಲೇ ಅನೇಕ ಅವಮಾನಗಳನ್ನು ಅನುಭವಿಸಬೇಕಾಯಿತು. ಕೊನೆಯಲ್ಲಿ ಅವಳ ಕುಟುಂಬ ಆರ್ಥಿಕವಾಗಿ ಉತ್ತಮ ಸ್ಥಿತಿಗೆ ಬಂದಾಗ ಅದೇ ಜಾತಿಯವರು ಅವರನ್ನು ಒಲೈಸಿ ತಮ್ಮ ಜಾತಿಯ ಒಳಗೆ ಪ್ರವೇಶ ಮಾಡಿಕೊಟ್ಟರು.

### ೧.೩. ಎಂ.ಎಸ್. ಲಕ್ಷ್ಮೀದೇವಿ

ಪ್ರಸ್ತುತ ಬೆಂಗಳೂರು ವಾಸಿಯಾದ ಎಂ.ಎಸ್. ಲಕ್ಷ್ಮೀದೇವಿಯವರು ಮೂಲತಃ ರಂಗನಟಿ. ಈಗ ಚಲನಚಿತ್ರದಲ್ಲಿ ಹಾಸ್ಯ ಕಲಾವಿದೆಯಾಗಿ, ಪೋಷಕ ನಟಿಯಾಗಿ ನಟಿಸುತ್ತಿದ್ದಾಳೆ.

ಇವರು ಕೋಲಾರ ಜಿಲ್ಲೆಯ ಚಿಂತಾಮಣಿಯಲ್ಲಿ ೧೯೨೮ರಲ್ಲಿ ಡೊಂಬರ ಕುಟುಂಬದಲ್ಲಿ ಜನಿಸಿದವರು. ಮದನಪಲ್ಲಿಯಲ್ಲಿ ಬಾಲ್ಯ ಕಳೆದರು, ಚಿಕ್ಕ ವಯಸ್ಸಿನಿಂದ ನೃತ್ಯ ಸಂಗೀತದ ಬಗ್ಗೆ ತುಂಬ ಆಸಕ್ತಿ. ನೃತ್ಯ ಕಲಿಯುವುದಕ್ಕಾಗಿ ಬೆಂಗಳೂರಿಗೆ ಬಂದರು. ನೃತ್ಯಸಂಗೀತದಲ್ಲಿ ವಿಶೇಷ ಪರಿಣಿತಿ ಹೊಂದಿ ರಂಗಭೂಮಿಗೆ ಪ್ರವೇಶ ಮಾಡಿದರು. ಇವರು ಗುಬ್ಬಿ ಕಂಪನಿಯಲ್ಲಿ ರಂಗನಟಿಯಾಗಿದ್ದರು. ಮೈಸೂರಿನಲ್ಲಿ ಹಲವಾರು ನೃತ್ಯ ಪ್ರದರ್ಶನಗಳನ್ನು ನೀಡಿದರು. "ರಂಗಭೂಮಿಯಿಂದ ಚಲನಚಿತ್ರಕ್ಕೆ ಕರೆಗಳು ಬಂದವು. 'ಬಿಂದು ಬಿ.ಎ.' ಚಿತ್ರದಲ್ಲಿ ಹಿನ್ನೆಲೆ ಗಾಯಕಿಯಾಗಿ ಪ್ರವೇಶಿಸಿದರು. ಈ ಚಿತ್ರ ಬಿಡುಗಡೆಯಾಗಲಿಲ್ಲ. ಆದರೂ ಹಾಡುಗಳು ಧ್ವನಿಮುದ್ರಿಕೆ ಮಾರುಕಟ್ಟೆಗೆ ಬಂದು ತುಂಬ ಜನಪ್ರಿಯತೆಯನ್ನು ಪಡೆದುಕೊಂಡವು. ಶ್ರೀನಿವಾಸ ಕಲ್ಯಾಣ ಚಿತ್ರದಲ್ಲಿ ೧೯೫೨ರಲ್ಲಿ ಚಿಕ್ಕಪಾತ್ರ ಮಾಡಿದರು."[೧೨] ಮಂಗಳಗೌರಿ, ಸೌಭಾಗ್ಯಲಕ್ಷ್ಮಿ, ಬಾಲನಾಗಮ್ಮ, ವೀರಕೇಸರಿ ಹಲವಾರು ಚಿತ್ರಗಳಲ್ಲಿ ಹಾಸ್ಯನಟಿಯಾಗಿ ನಟಿಸುತ್ತಿದ್ದಾರೆ. ಇತ್ತೀಚಿನ ದಿನಗಳಲ್ಲಿ ದೂರದರ್ಶನದ ಕಿರುಚಿತ್ರಗಳಲ್ಲಿ ನಟಿಸಿದ್ದಾರೆ. ಇತ್ತೀಚಿಗೆ ಪ್ರಸಾರವಾದ ಟಿ.ವಿ., ಧಾರವಾಹಿಗಳಾದ ಕಾವ್ಯಾಂಜಲಿ, ದುರ್ಗಾಶಕ್ತಿ ಮುಂತಾದವುಗಳಲ್ಲಿ ಇವರು ಪಾತ್ರವಹಿಸಿದ್ದಾರೆ.

ಇವರು ಅಭಿನಯ ಮಹತ್ವವಾದ ಮುಖದಲ್ಲಿ ಭಾವಾಭಿನಯ ಮೂಡಿಬರುತ್ತದೆ. ಕಲಾವಿದರು

ಯಾವುದೇ ಒಂದು ಪಾತ್ರಕ್ಕೆ ಜೀವತುಂಬುತ್ತಾರೆ. ಎಂ.ಎನ್. ಲಕ್ಷ್ಮೀದೇವಿಯವರು ಯಾವುದೇ ಚಿಕ್ಕ ಪಾತ್ರವಾದರು ಅದಕ್ಕೆ ಶ್ರದ್ಧೆಯಿಂದ ಅಭಿನಯ ಮಾಡುತ್ತಾರೆ. ಅವರ ಪಾತ್ರಗಳು ಪ್ರೇಕ್ಷಕರ ಮನಸ್ಸಿನಲ್ಲಿ ಅಚ್ಚೊತ್ತಿ ಉಳಿದುಬಂದಿವೆ. ನರಸಿಂಹರಾಜು, ಬಾಲಕೃಷ್ಣ ಜೊತೆಯಾಗಿ ಲಕ್ಷ್ಮಿದೇವಿ ಹಲವು ಸ್ಮರಣೀಯ ಪಾತ್ರಗಳನ್ನು ನಿರ್ವಹಿಸಿದ್ದಾರೆ. ಸಹಾಯಕ ನಟಿಯಾಗಿ, ಸಖಿಯಾಗಿ, ತಾಯಿಯಾಗಿ, ಅತ್ತೆಯಾಗಿ, ಹಾಸ್ಯನಟಿಯಾಗಿ, ಪೋಷಕಿಯಾಗಿ ಹಲವಾರು ಪಾತ್ರಗಳು ನಿರ್ವಹಿಸಿದ್ದಾರೆ. ಬೆಳ್ಳಿತೆರೆಯಲ್ಲಿ ಹಾಸ್ಯನಟಿಯಾಗಿ ಇವರು ಸಾರ್ಥಕ ಬದುಕುನ್ನು ಕಳೆಯುತ್ತಿದ್ದಾರೆ.

### ೧.೪. ಸ್ತ್ರೀ ಕಲಾವಿದೆಯರ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳು

ಯಾವತ್ತೂ ಸ್ತ್ರೀ ಕಲಾವಿದೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗಳು ತುಂಬ ಶೋಚನೀಯವಾಗಿವೆ. ಸಮಾಜ ಕಲಾವಿದೆಯರನ್ನು ತುಚ್ಛವಾಗಿ ಕಾಣುತ್ತಾ ಬಂದಿದೆ. ಹೀಗೆ ಕಾಣಲು ಕಾರಣವೂ ಇದೆ. ದೇವದಾಸಿ ಮತ್ತು ಸಮಾಜದಿಂದ ನಿರ್ಲಕ್ಷಕ್ಕೆ ಒಳಗಾದ ಈ ಕಲಾವಿದೆಯರ ಆರ್ಥಿಕ ಸ್ಥಿತಿಗತಿಗಳು ಉತ್ತಮವಾಗಿರುತ್ತಿರಲಿಲ್ಲ. ಬಡತನ ಭೂತದಂತೆ ಸದಾ ಕಾಡುತ್ತಿರುತ್ತದೆ. ಎಲ್ಲಿಯೂ ಸರಿಯಾಗಿ ನೆಲೆ ನಿಲ್ಲಲು ಅವಕಾಶಗಳಿರುವುದಿಲ್ಲ. ಯಾವ ನಿಶ್ಚಿತ ಆದಾಯದ ಮೂಲವಿರಲಿಲ್ಲ. ತಾಯಿ, ಅಣ್ಣ, ತಮ್ಮ, ಅಕ್ಕ, ತಂಗಿ ಮಕ್ಕಳನ್ನು ಸಾಕುವ ಜವಾಬ್ದಾರಿ ವಹಿಸಿಕೊಂಡಿದ್ದರು. ವರ್ಷದಲ್ಲಿ ಐದಾರು ತಿಂಗಳು ಮಾತ್ರ ಆಟದಲ್ಲಿ ಭಾಗವಹಿಸುವ ಅವಕಾಶಗಳು ಸಿಗುತ್ತಿದ್ದವು. ಆದರೆ ಈ ಅವಕಾಶ ಎಡಬಿಡದೆ ಸಿಗುತ್ತಿರಲಿಲ್ಲ. ಬಡತನಕ್ಕೆ ಹಣದ ಅವಶ್ಯಕತೆ ಇರುತ್ತದೆ. ರಂಗಭೂಮಿಯಲ್ಲಿ ಸಿಕ್ಕ ಅವಕಾಶಗಳನ್ನು ಸದುಪಯೋಗ ಪಡಿಸಿಕೊಂಡು ಪ್ರೇಕ್ಷಕರನ್ನು ರಂಜಿಸಿ ಅಕ್ಕಪಕ್ಕದ ಊರುಗಳಲ್ಲಿ ಆಟದಲ್ಲಿ ನಟಿಸಲು ತನಗೆ ಅನುಕೂಲ ಮಾಡಿಕೊಳ್ಳಲು ಸಾಮಾಜಿಕ ಸಣ್ಣಾಟಗಳಲ್ಲಿ ಚಿಮಣೆಯನ್ನು ಹೆಚ್ಚು ಹಾಸ್ಯ, ಶೃಂಗಾರ ಅಶ್ಲೀಲ ಪದಗಳ ಉಚ್ಚಾರಣೆಯೊಂದಿಗೆ ಯುವಕರ ಮನಸ್ಸನ್ನು ಸೆಳೆಯತೊಡಗಿದಳು ಕೆಲವರುಕಲಾವಿದೆಯರು ಸೆರಗು ಹಾಸುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳತೊಡಗಿದರು. ಕಲಾವಿದೆಯರು ಆಟದಲ್ಲಿ ನಟಿಸುವುದರೊಂದಿಗೆ ಹಣವಂತರ ಸಹವಾಸ ಪ್ರಾರಂಭಿಸಿದ ಮೇಲೆ ಆರ್ಥಿಕ ಸ್ಥಿತಿ ಸ್ವಲ್ಪ ಸುಧಾರಿಸಿತು. ಆದರೆ ಸಮಾಜದಲ್ಲಿ ಮರ್ಯಾದೆ ಮೊದಲೇ ಇರಲಿಲ್ಲ, ಮತ್ತಷ್ಟೂ ಕಡಿಮೆ ಆಯ್ತು. ಸಂಗ್ಯಾಬಾಳ್ಯ, ಕಡ್ಲಿಮಟ್ಟಿ ಸ್ಟೇಶನ್ ಮಾಸ್ತರ್, ಬಲವಂತ ಬಸವಂತ ಮುಂತಾದ ಆಟಗಳ ಪ್ರದರ್ಶನಕ್ಕಿಂತ ಒಂದೆರಡು ದಿನ ಮೊದಲು ಕಲಾವಿದೆಯರನ್ನು ಕರೆಸುವ ನೆಪದಲ್ಲಿ ನಟರು ಊರ ಪ್ರತಿಷ್ಠಿತ ವರ್ಗದ ರಸಿಕರು ಅವಳಿಗೆ ಹಣ ನೀಡಿ ಬೇಕಾದ ಹಾಗೆ ಬಳಸಿಕೊಳ್ಳುತ್ತಿದ್ದರು. ಎಲ್ಲಾ ಕಲಾವಿದೆಯರು ಈ ಮಾರ್ಗವನ್ನು ಹಿಡಿದಿರಲಿಲ್ಲ ಸುಮಾರು ಶೇಕಡಾ ೭೫ರಷ್ಟು ಸ್ತ್ರೀಯರು ನಟಿಸುವ ವೃತ್ತಿ ಜೊತೆಗೆ ಬೇರೆ ಪ್ರವೃತ್ತಿ ಅಂಟಿಸಿ ಕೊಂಡಿದ್ದರ

ಪರಿಣಾಮ, ಎಲ್ಲಾ ಕಲಾವಿದೆಯರು ಸೆರಗು ಹಾಸುವವರೇ ಎಂಬ ಭಾವನೆ ಜನರಲ್ಲಿ ಬೇರೂರಿತ್ತು. ಕೆಳ ಸ್ತ್ರೀಯರು ಕುಡಿತ ಚಟಕ್ಕೆ ಅಂಟಿಕೊಂಡದ್ದುಂಟು. ಈ ಕುಡಿತ ಅವರನ್ನು ತಾತ್ಕಾಲಿಕವಾಗಿ ಅವರ ಸಾಮಾಜಿಕ ಅವಮಾನಗಳನ್ನು ಮರೆಸುವ ಮಾಧ್ಯಮವಾಗಿಯೂ ಇವರಿಗೆ ದಕ್ಕಿತು.

"ದೇವದಾಸಿ ಬದುಕಿಗೆ ಅರ್ಪಿಸಿಕೊಂಡ ನಂತರ ಕಲಾವಿದೆಯಾಗಿ ಮುಂದುವರೆಯಲು" ಸ್ವಲ್ಪಮಟ್ಟಿಗೆ ಸ್ವಾತಂತ್ರ ಸಿಕ್ಕಿತೇನೊ ನಿಜ. ಇದನ್ನೇ ಸದುಪಯೋಗ ಪಡಿಸಿಕೊಂಡು ಕಲಾರಂಗದಲ್ಲಿ ಬೆಳೆದು ಮನೆಯಲ್ಲಿ ತನ್ನ ಅವಲಂಬಿತರನ್ನು ಸಾಕಿ ಸಲುವ ಹೊಣೆ ತಮ್ಮದಾಗಿಸಿಕೊಂಡರು. ಅದಕ್ಕೆ ಅವರು ತೆತ್ತಬೆಲೆ ಎಂದರೆ ವೈಯಕ್ತಿಕ ಸುಖದ ತ್ಯಾಗ, ಕಲಾವಿದೆಯಾಗಿ ಬೆಳೆದು ಕೀರ್ತಿಯ ತೆರೆಯ ಹಿಂದೆ ವೈಯಕ್ತಿಕ ಸುಖಕ್ಕೆ ಕೊಳ್ಳಿ ಇಟ್ಟುಕೊಳ್ಳಬೇಕು. ಯಾಕೆಂದರೆ ಅವರು ಒಬ್ಬ ಪುರುಷ ಸಂಗಾತಿಗೆ ನಿಷ್ಠರಾಗಿರುತ್ತಾರೆ. ಆದರೆ ಗಂಡಸರ ನಿಷ್ಠೆ ಇಬ್ಬರು ಮೂವರಲ್ಲಿ ಹಂಚಿಹೋಗಿರುತ್ತದೆ. ಪಾಲಿಗೆ ಬಂದದ್ದೇ ಪಂಚಾಮೃತ. ಸಿಕ್ಕಷ್ಟೇ ಸುಖವನ್ನು ಸ್ವೀಕರಿಸಬೇಕು. ನಮ್ಮ ಜವಾಬ್ದಾರಿ ಹೊರುವಂಥ ಆಕ್ರಿತ ವ್ಯಕ್ತಿಗಳು ನಮಗೆ ದೊರೆಯುವುದಿಲ್ಲ. ಆದ್ದರಿಂದ ಅವರು ಸದಾ ನಮ್ಮ ದುಡಿಮೆಯನ್ನೇ ನಚ್ಚಿಕೊಳ್ಳಬೇಕಾಗುತ್ತದೆ. ವರ್ಷದ ಹನ್ನೆರಡು ತಿಂಗಳೂ ಅವರಿಗೆ ನಾಟಕದ ಸೀಜನ್ ಇರುವುದಿಲ್ಲ. ಸೀಜನ್ ಇಲ್ಲದ ದಿನಗಳಲ್ಲಿ ಜಮೀನುಗಳಲ್ಲಿ, ಕೃಷಿ ಕೂಲಿಗಳಾಗಿ, ಹೊಲಿಗೆ ಪಶುಪಾಲನೆ ಕೆಲಸ ಮುಂತಾದ ಕೆಲಸಗಳನ್ನು ಮಾಡಬೇಕಾಗುತ್ತದೆ. ಯಾಕೆಂದರೆ ಅವರು ಅವರನ್ನು ಸಾಕಿಕೊಂಡರೆ ಸಾಲದು. ಅವರ ಬಂಧುಗಳನ್ನು ಸಾಕುವ ಹೊರೆ ಅವರದಾಗಿರುತ್ತದೆ. ಆದರೆ ಅವರಿಗೆ ಮುಪ್ಪಿನಲ್ಲಿ ಆಸರೆಯಾಗಿರಬೇಕಾದ ಬಾಳಸಂಗಾತಿಗಳೇ ಇರದೆ, ಇವರ ಕೊನೆಗಾಲದಲ್ಲಿ ಅನೇಕ ಕಷ್ಟಗಳನ್ನು ಎದುರಿಸಬೇಕಾಗುತ್ತದೆ. ಯಾವತ್ತೂ ನೀಗದ ಬಡತನವು ಸಹ ಬೆನ್ನು ಬಿದ್ದು ಇವರನ್ನು ಹಿಂಸಿಸುತ್ತಲೇ ಇರುತ್ತದೆ. ಆಸರೆ ನೀಡಬೇಕಾದ ಸಂಗಾತಿಗಳೇ ನಮ್ಮ ದುಡಿಮೆಯನ್ನು ಅವಲಂಬಿಸಿದ ಉದಾಹರಣೆಗಳಿವೆ..

ಅಗ್ನಿ ಸಾಕ್ಷಿಯಾಗಿ ಗಂಡನಿಂದ ತಾಳಿ ಕಟ್ಟಿಸಿಕೊಂಡವಳು ಮರೆಯಲ್ಲಿ ಹೇಗಾದರೂ ಇರಲಿ ಸಮಾಜದ ಕಣ್ಣಿಗೆ ಅವಳು ಧರ್ಮಪತ್ನಿ. ದೇವದಾಸಿಯರಿಗೆ ಈ ಸಮಾಜ ಇಂದಿಗೂ ಸೂಳೆಯ ಪಟ್ಟ ಕಟ್ಟುತ್ತಲೇ ಬಂದಿದೆ. "ನಮ್ಮ ಹಿರಿಯರ ಕಾಲದಲ್ಲಿ ಅಂದರೆ ನಾವು ಸಣ್ಣವರಿದ್ದಾಗ ದೇವದಾಸಿಯರನ್ನು ಅಷ್ಟೊಂದು ತುಚ್ಛವಾಗಿ ಕಾಣುತ್ತಿದ್ದಿಲ್ಲ. ಅವರಿಗೆ ಹೆಚ್ಚಿನ ಮರ್ಯಾದೆ ಇರುತ್ತಿತ್ತು. ಕೆಲವು ದೇವದಾಸಿಯರು ತಮ್ಮ ಸಂಗಾತಿಗಳ ವಿಧಿ ವಶರಾದಾಗ ಮಾಂಗಲ್ಯ ಕುಂಕುಮವನ್ನು ತೆಗೆದಿದ್ದಾರೆ."[೧೩]

ಹವ್ಯಾಸಿ ಕಲಾವಿದರು ಮತ್ತು ಕಲಾವಿದೆಯರಿಗೆ ಮೊದಲು ಹತ್ತು ರೂಪಾಯಿಯಿಂದ ಐವತ್ತು ರೂಪಾಯಿಗಳವರೆಗೆ ಸಂಭಾವನೆ ನೀಡುತ್ತಿದ್ದರು. ಈ ಸಂಭಾವನೆ ಅವರವರ ಪ್ರತಿಭೆಗೆ ಅನುಗುಣವಾಗಿ

ನಿರ್ಧಾರವಾಗುತ್ತಿತ್ತು. ಈಗ ಮೂರುನೂರುರಿಂದ ಐದುನೂರು ರೂಪಾಯಿಗಳವರೆಗೆ ಸಂಭಾವನೆ ಪಡೆಯುತ್ತಾರೆ. ಇಂದು ಬಯಲಾಟಗಳಲ್ಲಿ ನಟಿಸುವ ಅವಕಾಶಗಳು ಕಡಿಮೆಯಾಗಿವೆ. ತಿಂಗಳಿಗೆ ಒಂದೂ ಅಥವಾ ಎರಡು ಆಮಂತ್ರಣಗಳು ಬರುತ್ತವೆ. ಎಂಟನೂರರಿಂದ ಸಾವಿರ ರೂಪಾಯಿ ಪಡೆದರೂ ಸಂಸಾರ ನಡೆಸಲಿಕ್ಕೆ ಇವರಿಗೆ ಆಗುವುದಿಲ್ಲ. ವರ್ಷಪೂರ್ತಿ ಅವಕಾಶಗಳಿರುವುದಿಲ್ಲ. ಶ್ರೀಮತಿ ಗೌರಮ್ಮ ಹೇಳುತ್ತಾರೆ "ಕಲೆಗಾಗಿ ನಮ್ಮ ಜೀವನವನ್ನೇ ಒತ್ತೆಯಿಟ್ಟು ಹಾಳಾಗಿದ್ದೇವೆ. ವಯಸ್ಸಿದ್ದಾಗ ಚೆನ್ನಾಗಿ ಕುಣಿದು ಜನರನ್ನು ರಂಜಿಸಿ ಶಭಾಷಗಿರಿಯನ್ನು ಪಡೆದುಕೊಂಡಿದ್ದೇವೆ. ಈಗ ಕುಣಿಯುವ ಅವಕಾಶವೂ ಇಲ್ಲ, ಕಲಾವಿದೆಯರ ಆರ್ಥಿಕ ಸ್ಥಿತಿಗಳು ತೀರ ಶೋಚನೀಯವಾಗಿವೆ. ವಯಸ್ಸು ಆದನಂತರ ಕಲಾವಿದರು ಕೂಲಿ ಮಾಡಿ ಬದುಕುವ ಸ್ಥಿತಿ ಬರುತ್ತದೆ. ಒಳ್ಳೆಯ ಕಲಾವಿದೆ ಎಂದು ಮಾತ್ರ ಹೇಳುತ್ತಾರೆ. ಆ ನಮ್ಮ ಬದುಕಿಗೊಂದು ದಾರಿಯೇ ಇರುವುದಿಲ್ಲ." ಒಟ್ಟಿನಲ್ಲಿ ಕೆಳಜಾತಿಗಳಿಂದ ನಟಿಯರಾಗಿ ರಂಗ ಪ್ರವೇಶಿಸಿದ ಬಹುತೇಕ ಎಲ್ಲ ನಟಿಯವರು ಇದೇ ಬಗೆಯ ಸಾಮಾಜಿಕ ಮತ್ತು ಆರ್ಥಿಕ ಸಂಕಷ್ಟಗಳನ್ನು ಅನುಭವಿಸಲೇ ಬೇಕಾದ ಅನಿವಾರ್ಯತೆ ಇಂದೂ ಇದೆ. ಒಂದೆಡೆ ಆರ್ಥಿಕವಾಗಿ ಕುಸಿದ ಹೋದ ಕುಟುಂಬ ಸ್ಥಿತಿ. ಇನ್ನೊಂದೆಡೆ ಸಾಮಾಜಿಕ ಅವಮಾನಗಳು ಈ ಎರಡರಿಂದ ರಂಗನಟಿಯರ ಬದುಕು ಅತ್ಯಂತ ಹೀನಾಯವಾಗಿರುತ್ತದೆ.



■■

**ಟಿಪ್ಪಣಿಗಳು**

೧. ಕಲಾವಿದೆ ಡೊಂಬರ ಸಂಸ್ಕೃತಿ, ದೇವೇಂದ್ರಕುಮಾರ ಸಿ.ಹಕಾರಿ, ಪು.೨೨, ೨೪

೨. ಅದೇ ಪು.೧೨೮

೩. ಅಪರಾಳ ತಮ್ಮ ಕೃತಿ ಶ್ರೀಕೃಷ್ಣ ಪಾರಿಜಾತ, ಆರ್.ಜಿ. ಕುಲಕರ್ಣಿ ಅಂಕೇರಿ, ಪು.೨೫

೪. ಅದೇ ಪು.೨೭,೨೮

೫. ದಲಿತರ ಬದುಕು ಮತ್ತು ಸಂಸ್ಕೃತಿ, ಡಾ. ಅರ್ಜುನ ಗೊಳಸಂಗಿ, ಪು. ೩೧೬

೬. ಡೊಂಬರು ಒಂದು ಅಧ್ಯಯನ, ಡಾ. ಎಚ್.ಎಮ್. ಮಹೇಶ್ವರಯ್ಯ ಡಾ. ಎ. ಮುರಿಗೆಪ್ಪ, ಪು.೬

೭. ಅದೇ...ಪು.೭

೮. ರಂಗಭೂಮಿ ಮತ್ತು ಸಮುದಾಯ ಕೆ.ವಿ. ಸುಬ್ಬಣ್ಣ, ಪು.೯

೯. ಜಾನಪದ ಜಗತ್ತು ವಿಶೇಷ ಸಂಚಿಕೆ ಮಡಿಲಕ್ಕಿ, ಡಾ. ಬಸವರಾಜ ಮಲಶೆಟ್ಟಿ, ಪು.೮೭

೧೦. ಕಲಾವಿದೆ ಶ್ರೀಮತಿ ಸಣ್ಣತಿಪ್ಪಮ್ಮ ವಕ್ಕರು ಡಿ. ಸರೋಜಮ್ಮ ಇವರ ಕುಟುಂಬದ ಹೇಳಿಕೆ

೧೧. ಬಯಲಾಟದ ರಂಗನಟ ಶ್ರೀಮತಿ ಗೌರಮ್ಮ ಇವರ ಹೇಳಿಕೆ.

೧೨. ಕನ್ನಡ ಚಲನಚಿತ್ರ ಇತಿಹಾಸ ಸಂ. ಆರ್. ಲಕ್ಷ್ಮಣ, ಎಂ.ಬಿ. ರಾಮಕೃಷ್ಣಯ್ಯ, ಪಿ.ಜಿ. ಶ್ರೀನಿವಾಸಮೂರ್ತಿ, ಶ್ರೀಕೃಷ್ಣ, ಸಿ. ಸೀತಾರಾಂ ದೊಡ್ಡ ಹಲ್ಲೂರು ರುಕ್ಕೊಜರಾವ್, ಬಾ.ನಾ. ಸುಬ್ರಹ್ಮಣ, ಗಂಗಾಧರ ಮೊದಲಿಯರ್, ಪು.೬೮೯

೧೩. ಮರಿಯಮ್ಮನಹಳ್ಳಿ ರಂಗಸಿರಿ ಸಂ. ಗುಡಿಹಳ್ಳಿ ನಾಗರಾಜ, ಪು.೭೩

ಅಧ್ಯಾಯ ೪

# ಡೊಂಬರ ಸಮುದಾಯ ಮತ್ತು ಕೌಜಲಗಿ ನಿಂಗಮ್ಮ

## ಹಿನ್ನೆಲೆ

ಉತ್ತರ ಕರ್ನಾಟಕದಲ್ಲಿ ಕೌಜಲಗಿ ನಿಂಗಮ್ಮನ ಹೆಸರು ಕೇಳದೆ ಇರುವವರು ಯಾರು ಇಲ್ಲ. ಪಾರಿಜಾತದ ಕಲಾವಿದೆಯಾದ ನಿಂಗಮ್ಮ ರಂಗಭೂಮಿಯ ಮೊಟ್ಟಮೊದಲ ನಟಿಯಾಗಿದ್ದಾಳೆ. ಪಾರಿಜಾತವನ್ನು ಉಳಿಸಿ ಬೆಳೆಸಿಕೊಂಡು ಬರುವಲ್ಲಿನ ಸಿಂಹಪಾಲು ನಿಂಗಮ್ಮಳಿಗೆ ಸೇರುತ್ತದೆ. ಶ್ರೀಕೃಷ್ಣ ಪಾರಿಜಾತ ಕೃತಿಯನ್ನು ಮೊದಲಿಗೆ ರಚನೆ ಮಾಡಿದವನು ಅಪರಾಳ ತಮ್ಮಣ್ಣ. ಆದರೆ ಆತ ಸಂಪೂರ್ಣವಾಗಿ, ಪಾರಿಜಾತವನ್ನು ರಚನೆ ಮಾಡುವುದಕ್ಕೆ ಆಗಲಿಲ್ಲ. ನಂತರ ಅದನ್ನು ಶಿರುಗುಪ್ಪಿಯ ಸದಾಶಿವಯ್ಯ ಪೂರ್ಣ ಮಾಡುತ್ತಾನೆ. ಅಪರಾಳ ತಮ್ಮಣ್ಣನ ಶ್ರೀಕೃಷ್ಣ ಪಾರಿಜಾತ ಹಾಡುಗಬ್ಬ ರೂಪದಲ್ಲಿ ಇತ್ತು. ಅಪರಾಳ ತಮ್ಮಣ್ಣನ ಕೃತಿಯ ಪ್ರೇರಣೆಯಿಂದ ಕುಲಗೋಡ ತಮ್ಮಣ್ಣ ವಿಶಿಷ್ಟ ರೀತಿಯಲ್ಲಿ ಕೃಷ್ಣ ಪಾರಿಜಾತ ಕೃತಿಯನ್ನು ರಚಿಸಿದನು. ಮೂಲಕ್ಕೆ ಧಕ್ಕೆ ಬಾರದಂತೆ ಸಂಗೀತಕ್ಕೆ ಹೆಚ್ಚಿನ ಒತ್ತುಕೊಟ್ಟು, ಪ್ರಪ್ರಥಮ ಬಾರಿಗೆ ರಂಗಕ್ಕೆ ಪಾರಿಜಾತವನ್ನು ಅಳವಡಿಸಿದ ಕೀರ್ತಿ ಕುಲಗೋಡ ತಮ್ಮಣ್ಣನಿಗೆ ಸೇರುತ್ತದೆ.

ಪಾರಿಜಾತ ಕಲಾವಿದರಲ್ಲಿ ಹುಕ್ಕೇರಿ ಸಿದ್ರಾಮಪ್ಪ, ಕುಲಗೋಡದ ನೀಲವ್ವ, ಬಾರ್ಕಿ, ಕೌಜಲಗಿ ನಿಂಗಮ್ಮ ಇವರು ಎಲ್ಲರೂ ಕುಲಗೋಡು ತಮ್ಮಣ್ಣನ ಕೈಯಲ್ಲಿ ಕಲಿತವರು. ಪಾರಿಜಾತವು ರಂಗಭೂಮಿಯಲ್ಲಿ ವಿಶೇಷತೆಯನ್ನು ಪಡೆದುಕೊಂಡ ತನ್ನದೇ ಆದ ಸ್ವರೂಪವನ್ನು ಪಡೆದುಕೊಳ್ಳಲು ಹಾಗೂ ಜನಪ್ರಿಯವಾಗಲು ಮುಖ್ಯ ಕಾರಣ ಕಲಾವಿದರು. ಪಾರಿಜಾತವು ಯಶಸ್ಸಿನ ಶಿಖರವನ್ನು ಏರಲು ಬಹುಪಾಲು ಕೌಜಲಗಿ ನಿಂಗಮ್ಮನೇ ಆಗಿದ್ದಾಳೆ. ಇತ್ತೀಚಿನ ದಿನಗಳಲ್ಲಿ ಸಹ ಉತ್ತರ ಕರ್ನಾಟಕದಲ್ಲಿ ಪಾರಿಜಾತಕ್ಕೆ ಶ್ರೀಕೃಷ್ಣ ಪಾರಿಜಾತ ನಾಟಕ ಎಂದು ಯಾರೂ ಹೇಳುವುದಿಲ್ಲ. ನಿಂಗಮ್ಮನ ಪಾರಿಜಾತ ಎಂದೇ ಕರೆಯುತ್ತಾರೆ.

ಕೌಜಲಗಿ ನಿಂಗಮ್ಮ ನಟಿಯಾಗಿ ತಾನೊಬ್ಬಳೇ ಬೆಳೆಯಲಿಲ್ಲ. ಒಂದು ಕಡೆ ಕಲಾವಿದರನ್ನು ಇನ್ನೊಂದು ಕಡೆ ಪಾರಿಜಾತವನ್ನು ಬೆಳೆಸಿಕೊಂಡು ಬಂದಳು. ಕಲೆಯ ಆರಾಧಕಳು ಮತ್ತು ಪೋಷಕಳೂ ಆಗಿದ್ದಳು. ನಿಂಗಮ್ಮ ತನ್ನ ಕೊನೆಯುಸಿರು ಇರುವವರಿಗೂ ರಂಗಭೂಮಿಗೆ ಸೇವೆ ಸಲ್ಲಿಸಿದಳು. ನಿಂಗಮ್ಮನ ಸಾಧನೆ ಅಪಾರವಾಗಿದೆ. ನಿಂಗಮ್ಮಳ ಪಾರಿಜಾತಕ್ಕೆ ಇನ್ನೊಂದು ಹೆಸರಾಗಿ ಪ್ರಸಿದ್ಧಳಾಗಿದ್ದಾಳೆ. ನಿಕೃಷ್ಟ ಕಾಲಘಟ್ಟದಲ್ಲಿ ತಾನೊಬ್ಬ ಹೆಣ್ಣಾಗಿ ಒಂದು ನಾಟಕದ ಕಂಪನಿಯನ್ನೇ ಕಟ್ಟಿಕೊಂಡು, ಪಾರಿಜಾತದಲ್ಲಿ ಅನೇಕ ಪ್ರಯೋಗಗಳನ್ನು ಮಾಡಿದ್ದಾಳೆ. ಕಂಪನಿಯು ನಿಂತೇ ಹೋಯಿತೆನ್ನುವಾಗ ಹಠಬಿಡದೆ ನಿಂತ ಕಂಪನಿಯನ್ನು ಉಳಿಸಿ, ಪಾರಿಜಾತದ ಅಪಾರ ಜನಪ್ರಿಯತೆಗೆ ನಿಂಗಮ್ಮಳೇ ಕಾರಣ ವಾಗಿದ್ದಾಳೆ. ಇಂತಹ ನಿಂಗಮ್ಮನ ಹಿನ್ನೆಲೆ ಏನು ಅವಳ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳೇನು? ಎಂಬುದನ್ನು ಕಂಡುಕೊಳ್ಳಬೇಕಿದೆ. ಈ ಅಧ್ಯಾಯದಲ್ಲಿ ನಿಂಗಮ್ಮಳ ಸಾಮಾಜಿಕ ಆರ್ಥಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಗಳನ್ನು ವಿವರಿಸುವ ಪ್ರಯತ್ನ ಮಾಡಿದ್ದೇನೆ.

ಸಮುದಾಯವು ಅಂದಿನ ಸಹ ನಟಿಯರನ್ನು ನೋಡುತ್ತಿದ್ದ ದೃಷ್ಟಿಕೋನ ಯಾವುದು ಒಟ್ಟು ಒಂದು ಸಮುದಾಯದ ಸೃಷ್ಟಿಯಾಗಿ ನಿಂಗಮ್ಮ ರೂಪಗೊಂಡ ಬಗೆ, ತನ್ನ ಸಮುದಾಯದ ಕುರಿತು ನಿಂಗಮ್ಮಳಿಗೆ ಯಾವ ಬಗೆಯ ಅಭಿಪ್ರಾಯಗಳಿದ್ದವು ಎಂಬ ಪ್ರಶ್ನೆಗಳನ್ನು ಈ ಅಧ್ಯಾಯದಲ್ಲಿ ಕೇಳಿಕೊಳ್ಳಲಾಗಿದೆ.

## ಅ. ಕೌಜಲಗಿ ನಿಂಗಮ್ಮನ ಸಾಮಾಜಿಕ ಹಿನ್ನೆಲೆ

ವಸಾಹತು ಕಾಲಘಟ್ಟದ ಉತ್ತರ ಕರ್ನಾಟಕದಲ್ಲಿ ಅದರಲ್ಲೂ ಬಿಜಾಪುರ ಮತ್ತು ಬೆಳಗಾವ ಭಾಗದಲ್ಲಿ ಸಾಮಾಜಿಕ ಅಸಮಾನತೆಗಳು ಅತ್ಯಂತ ಪ್ರಜ್ಞಾಪೂರ್ವಕವಾಗಿ ಆಚರಿಸಲ್ಪಡುತ್ತಿದ್ದ ಸಂದರ್ಭದಲ್ಲಿ, ಕೆಳಜಾತಿಗಳ ಬದುಕು ಅತ್ಯಂತ ಹೀನಾಯವಾಗಿತ್ತು. ಒಂದೆಡೆ ಬ್ರಿಟಿಷ್ ಸರ್ವಾಧಿಕಾರ, ಇನ್ನೊಂದೆಡೆ ದೇಶೀಯ ಭೂಮಾಲಿಕರ ಹಿಡಿತದಲ್ಲಿ ದುಡಿವ ವರ್ಗಗಳ ನಲುಗಿ ಹೋಗಿದ್ದವು. ಕೆಳಜಾತಿಗಳನ್ನು ಶೋಷಿಸಲೆಂದೇ ಹುಟ್ಟುಹಾಕಿದ ಹಲವು ಸಾಮಾಜಿಕ ಮತ್ತು ಸಾಂಸ್ಕೃತಿಕ ನಿಯಮಗಳು ಎಗ್ಗಿಲ್ಲದೆ ಆಚರಣೆಯಲ್ಲಿದ್ದವು. (ಈಗಲೂ ಇವೆ) ಹಲವು ಸಾಂಸ್ಕೃತಿಕ ವಿಕಾರಗಳನ್ನು ಸೃಷ್ಟಿಸಿ ಕೆಳಜಾತಿಯ ಮಹಿಳೆಯರನ್ನು ಆಟದ ಬೊಂಬೆಗಳ ತರಹ ನಡೆಸಿಕೊಳ್ಳುತ್ತಿದ್ದ ಆ ಕಾಲಘಟ್ಟದಲ್ಲಿ, ಡೊಂಬರ ಮಹಿಳೆಯರನ್ನು ಓಕುಳಿ ಆಚರಣೆಯಲ್ಲಿ ವಿಚಿತ್ರವಾಗಿ ಬಳಸಲಾಗುತ್ತಿತ್ತು. ಹನುಮಂತ ದೇವರ ಜಾತ್ರೆಯ ದಿನ ನಡೆವ ಓಕುಳಿ ಎರಚುವ ಆಚರಣೆಗೆ ಕೌಜಲಗಿಯಲ್ಲಿ (ಬೆಳಗಾಂ ಜಿಲ್ಲೆ) ಡೊಂಬರ ಸುಂದರ ಯುವತಿಯರನ್ನು ನೇಮಿಸಲಾಗುತ್ತಿತ್ತು. (ಈವತ್ತಿಗೂ ಕೆಲವು ವಿರೋಧಗಳ ನಡುವೆ ಆಚರಣೆಯಲ್ಲಿ ಜೀವಂತವಾಗಿದೆ.) ಡೊಂಬರ ಮಹಿಳೆಯರನ್ನು ಓಕುಳಿ ಹೊಂಡದಲ್ಲಿ ಬೀಳಿಸಿ ಅಲ್ಲಿನ ಮೇಲ್ಜಾತಿಯ

ಗಂಡಸರು ಓಕುಳಿ ಎರಚಿ ಖುಷಿ ಪಡುವ ಆಚರಣೆ ನಡೆಯುತ್ತಿತ್ತು. ಮೊದಲೇ ಅಲೆಮಾರಿ ಸಮುದಾಯವಾದ ಡೊಂಬರು ಈ ಆಚರಣೆಯನ್ನು ತಲೆಬಾಗಿ ಒಪ್ಪಿಕೊಂಡಿದ್ದರು. ಯಾವ ಸಾಮಾಜಿಕ ಅಧಿಕಾರಗಳಿಲ್ಲದ ಈ ಸಮುದಾಯ ಅಲ್ಲಿನ ಭೂಮಾಲಿಕರ ಸ್ಪಷ್ಟ ಹಿಡಿತದಲ್ಲಿ ಈ ಆಚರಣೆಯಲ್ಲಿ ಪಾಲ್ಗೊಳ್ಳಲೇಬೇಕಿತ್ತು. ಕೌಜಲಗಿ ನಿಂಗಮ್ಮನ ತಾಯಿ ಈ ರೀತಿಯಲ್ಲಿ ಓಕುಳಿಯನ್ನು ಎರಚಿಸಿಕೊಳ್ಳುವ ಮಹಿಳೆಯಾಗಿ ಆರಿಸಲ್ಪಟ್ಟಿದ್ದಳು. ಪ್ರತಿವರ್ಷದ ಜಾತ್ರೆಯಂದು ನಿಂಗಮ್ಮನ ತಾಯಿ ಪರಂಪರೆಯಂತೆ ಮೇಲ್ಜಾತಿಯ ಗಂಡಸರಿಂದ ಓಕುಳಿಯನ್ನು ಎರಚಿಸಿಕೊಳ್ಳಬೇಕಿತ್ತು. ಈ ಬಗೆಯ ಹೀನಾಯ ಸಂಪ್ರದಾಯಕ್ಕೆ ಈಡಾಗುವ ಸಮುದಾಯಕ್ಕೆ ಸಹಜವಾಗಿಯೇ ಸಾಮಾಜಿಕ ಮತ್ತು ಆರ್ಥಿಕ ಸ್ವಾತಂತ್ರ್ಯಗಳನ್ನು ಮೇಲ್ಜಾತಿಗಳು ಇಲ್ಲವಾಗಿಸಿರುತ್ತಾರೆ. ಈ ಬಗೆಯ ಸಾಮಾಜಿಕ, ಆರ್ಥಿಕ ಸ್ವಾತಂತ್ರ್ಯಗಳು ನಾಶಗೊಂಡ ಮೇಲೆಯೇ ಸಮುದಾಯವೊಂದು ಈ ರೀತಿಯ ಆಚರಣೆಯಲ್ಲಿ ತಮ್ಮ ಹೆಣ್ಣುಗಳನ್ನು ಪ್ರದರ್ಶನದ ವಸ್ತುವಾಗಿಸಲು ಸಾಧ್ಯ.

ನಿಂಗಮ್ಮನ ತಾಯಿ ಅನಿವಾರ್ಯವಾಗಿ ಈ ಆಚರಣೆಯಲ್ಲಿ ಪಾಲ್ಗೊಳ್ಳಲೇಬೇಕಿತ್ತು. ಕಾರಣ, ಅವಳ ಸಮುದಾಯ ಸಹಜವಾಗಿಯೇ ಈ ಶ್ರೇಣೀಕರಣದ ಹೀನ ನಿಯಮಗಳಿಗೆ ತನ್ನನ್ನು ಒಪ್ಪಿಸಿಕೊಂಡಿತ್ತು. ಇದೇ ಬಗೆಯ ಆಚರಣೆಯು ಶಿವಮೊಗ್ಗ ಜಿಲ್ಲೆಯಲ್ಲಿ ನಡೆಯುತ್ತದೆ. ಡೊಳ್ಳುಪ್ರಸ್ಥ ಅಥವಾ ಡೊಂಬರ ಹಬ್ಬ, ಎಂದು ಕರೆಯಲ್ಪಡುವ ಈ ಆಚರಣೆಯಲ್ಲಿ ಡೊಂಬರ ಸುಂದರ ಯುವತಿಯರನ್ನು ಅರೆಬೆತ್ತಲಾಗಿ ಮಾಡಿ ಕುಣಿಸಲಾಗುತ್ತದೆ. ಇದಕ್ಕೆ ಈ ದೇಶದ ಘನ ಪರಂಪರೆ ಕೊಡುವ ಕಾರಣ ಹೀಗಿದೆ. "ಕುಮಾರರಾಮನನ್ನು ಸಹಜವಾಗಿಯೇ ಪ್ರೀತಿಸಿ, ಮದುವೆಯಾಗ ಬಯಸಿದ ರತ್ನಾಜಿ ಕೊನೆಯಲ್ಲಿ ವಿಫಲಳಾಗಿ, ಕುಮಾರರಾಮನ ವಿರುದ್ಧ ಕಂಪಿಲನಿಗೆ ದೂರು ಹೇಳಿ ಆತನಿಗೆ ಶಿಕ್ಷೆ ಕೊಡಲು ಯತ್ನಿಸುತ್ತಾಳೆ. ಆದರೆ ಕಂಪಿಲನ ಶಿಕ್ಷೆಗೆ ಬಲಿಯಾಗುವವನು ಹೋಲಿಕೆರಾಮ. ಹೋಲಿಕೆರಾಮನು ತಲೆಯನ್ನು ಕತ್ತರಿಸುವ ಶಿಕ್ಷೆಗೆ ಗುರಿಯಾಗುತ್ತಾನೆ. ಶಿಕ್ಷೆ ಜಾರಿಯಾಗಿ ಹೋಲಿಕೆರಾಮನ ರುಂಡವನ್ನು ಕತ್ತರಿಸಲಾಗುತ್ತದೆ. ಕತ್ತರಿಸಲ್ಪಟ್ಟ ಆ ತಲೆಯು ಡೊಂಬರ ಯುವತಿಯರು ವರ್ಷಕೊಂದು ಸಲ ನನ್ನ ಮುಂದೆ ಅರೆಬೆತ್ತಲಾಗಿ ಕುಣಿಯುವಂತಾಗಲಿ ಎಂದು ಶಾಪ ಕೊಟ್ಟನಂತೆ. ಅಂದಿನಿಂದ ಹೋಲಿಕೆ ರಾಮನ ರುಂಡದ ಮುಂದೆ ಡೊಂಬರ ಯುವತಿಯವರು ಅರೆಬೆತ್ತಲಾಗಿ ಕುಣಿಯುವ ಆಚರಣೆಯು ಚಾರಿತ್ರಿಕವಾಗಿ ಸಮರ್ಥಿಸಲ್ಪಟ್ಟಿತು. ಇಂದಿಗೂ ಶಿವಮೊಗ್ಗ ಜಿಲ್ಲೆಯು ಡೊಂಬರು ವಾಸಿಸುವ ಹಿಂದುಳಿದ ಹಳ್ಳಿಗಳಲ್ಲಿ ಈ ಆಚರಣೆ ಜಾರಿಯಲ್ಲಿದೆ. ಅಂದರೆ ಇಂಡಿಯಾದ ಸಮಾಜವು ಆಚರಣೆಯ ಹೆಸರಲ್ಲಿ ಕೆಳಜಾತಿಯ ಸ್ತ್ರೀಯರನ್ನು ಪ್ರದರ್ಶನದ ವಸ್ತುವಾಗಿಸುವ ಪರಂಪರೆ ಅವ್ಯಾತವಾಗಿ ನಡೆಯುತ್ತಲೇ ಬಂದಿದೆ.

ಇಂತಹ ಪರಂಪರೆಯಲ್ಲಿ ಬಳಲಿ ಬೆಂದವಳು ಕೌಜಲಗಿ ನಿಂಗಮ್ಮನ ತಾಯಿ. ಸಹಜವಾಗಿಯೇ ನಿಂಗಮ್ಮನ ತಾಯಿಗೆ ತಾನು ಆಚರಣೆಯಲ್ಲಿ ಪ್ರದರ್ಶನದ ವಸ್ತುವಾಗುವ ಕುರಿತು ಅಸಹ್ಯವಿದೆ. ಮಗಳು ತನ್ನಂತೆಯೇ ಈ ಶ್ರೇಣೀಕರಣದ ಅದೃಶ್ಯದ ಕಟ್ಟಳೆಗಳಿಗೆ ತುತ್ತಾಗಬಾರದೆಂದೇ ಬಯಸಿದಳು. ನೃತ್ಯ, ಸಂಗೀತ ಸಹಜವಾಗಿಯೇ ರೂಢಿಸಿದ್ದ ತನ್ನ ಸಮುದಾಯದ ಹಿನ್ನೆಲೆಯನ್ನು ಮನಸ್ಸಲ್ಲಿಟ್ಟುಕೊಂಡೇ ನಿಂಗಮ್ಮನನ್ನು ಯಾದವಾಡ ಮಲಕಪ್ಪನ ಹತ್ತಿರ ಸಂಗೀತ ಕಲಿಯಲು ಹಚ್ಚಿದಳು.

ಹೀಗಾಗಿ, ಕೌಜಲಗಿ ನಿಂಗಮ್ಮ ಅಲೆಮಾರಿ ಸಮುದಾಯದಲ್ಲಿ ಹುಟ್ಟಿ ಅನೇಕ ಸಾಮಾಜಿಕ ಅವಮಾನಗಳನ್ನು ಅನುಭವಿಸಿದಳು. ಈ ಅವಮಾನಗಳೇ ಅವಳು ರಂಗಭೂಮಿಯ ಅಭಿಜಾತ ಕಲಾವಿದೆಯಾಗಲೂ ಕಾರಣವಾದವು. ಉತ್ತರ ಕರ್ನಾಟಕದಲ್ಲಿ ಪ್ರಚಲಿತದಲ್ಲಿದ್ದ ಓಕುಳಿ ಪದ್ಧತಿ ಹಾಗೂ ಎಲ್ಲಮ್ಮನ ಆರಾಧನೆ, ಈ ಎರಡು ಸಂಪ್ರದಾಯಗಳು ಕೆಳಜಾತಿಯ ಸ್ತ್ರೀಯರನ್ನು ದೇವದಾಸಿ ಪದ್ಧತಿಗೆ ಒಳಪಡಿಸಿವೆ. ಮಹಿಳೆಯನ್ನು ಭೋಗದ ವಸ್ತುವನ್ನಾಗಿಸುವ ಸಮಾಜ ರೂಪಿಸಿದ ಸಂಪ್ರದಾಯಗಳಲ್ಲಿ ಇವು ಪ್ರಮುಖವಾದವು. ಈ ಪದ್ಧತಿಯನ್ನು ಪರೋಕ್ಷವಾಗಿ ಖಂಡಿಸಿ ನಿಂಗಮ್ಮ ರಂಗಭೂಮಿಯನ್ನು ಪ್ರವೇಶಿಸಿದಳು.

ನಿಂಗಮ್ಮ ಡೊಂಬರ ಸಮುದಾಯದಲ್ಲಿದ್ದ ಹುಟ್ಟಿದ ಮಹಿಳೆ. ಡೊಂಬರ ಮೂಲ ವೃತ್ತಿಯನ್ನು ಮೈಗೂಡಿಸಿಕೊಂಡು ಬಂದವಳು. ಡೊಂಬರಿಗೆ ರಂಗಭೂಮಿಯೇನು ಹೊಸದಲ್ಲ. ಡೊಂಬರು ಮೂಲತಃ ರಂಗಭೂಮಿ ಜೊತೆ ಬೆಳೆದುಕೊಂಡು ಬಂದವರು. ಡೊಂಬರಾಟವಾಡುವ ಬಯಲೇ ಅವರಿಗೆ ತಾತ್ಕಾಲಿಕ ರಂಗಭೂಮಿ. ಅಲ್ಲಿ ಜನರನ್ನು ರಂಜಿಸಲು ಇವರು ಸಂಗೀತ, ನೃತ್ಯಗಳಿಗೂ ಮೊರೆ ಹೋಗುತ್ತಿದ್ದರು. ಕಾರಣಕ್ಕಾಗಿ ನಿಂಗಮ್ಮನಂತಹ ಕಲಾವಿದೆಗೆ, ಅವಳ ಸಮುದಾಯಿದ ಪರಂಪರೆಯೇ ಚೈತನ್ಯವನ್ನು ಒದಗಿಸಿತ್ತು.

## ೧. ಕೌಜಲಗಿ ನಿಂಗಮ್ಮನ ಬಾಲ್ಯಜೀವನ

ಕೌಜಲಗಿ ನಿಂಗಮ್ಮ "ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಕೌಜಲಗಿಯಲ್ಲಿ ೧೮೫೭ರಲ್ಲಿ ಜನಿಸಿದಳು."[೧] ಡೊಂಬರ ಕುಟುಂಬದಲ್ಲಿ ಹುಟ್ಟಿ ತಮ್ಮ ಮೂಲವೃತ್ತಿಗೆ ಪೂರಕವಾದ ಸಂಗೀತದ ಕುರಿತು ವಿಶೇಷ ಒಲವನ್ನು ನಿಂಗಮ್ಮ ಬೆಳೆಸಿಕೊಂಡಳು. ಆದರೆ ಅವಳ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳು ಇವಳಿಗೆ ಪೂರಕವಾಗಲಿಲ್ಲ. ತಾಯಿ ಬೇರೆ ಓಕುಳಿ ಆಚರಣೆಯಲ್ಲಿ ಭಾಗವಹಿಸುತ್ತಿದ್ದಳು. ಸಂಗೀತಾಭ್ಯಾಸವೆಂಬುದು ಅವಳಿಗೆ ಕನಸಿನ ಮಾತೇ ಆಗಿತ್ತು. ನಿಂಗಮ್ಮನ ತಾಯಿ ತನ್ನ ಮಗಳನ್ನು ತಾನಿದ್ದ ಹೀನ ಸಂಪ್ರದಾಯದಿಂದ ದೂರ ತರಲೆಂದು ಭಾವಿಸಿ, ಸಂಗೀತಾಭ್ಯಾಸ ಮಾಡಲು ಕಳುಹಿಸಿದಳು.

"ನಿಂಗಮ್ಮನ ತಾಯಿ ಓಕುಳಿ ಪದ್ಧತಿಗೆ ಬಲಿಯಾಗಿದ್ದಳು."[೨] ಮೇಲ್ಜಾತಿಯವರನ್ನು ಎದುರು ಹಾಕಿಕೊಳ್ಳದೇ ನಿಂಗಮ್ಮನ ತಾಯಿ ತನ್ನಂತೆ ನನ್ನ ಮಗಳ ಬಾಳು ಆಗಬಾರದು ಎಂದು ಕೌಜಲಗಿ ಬಿಟ್ಟು ಮಹಾಲಿಂಗಪುರಕ್ಕೆ ಬಂದಳು. "ನಿಂಗಮ್ಮ ಪ್ರಾಥಮಿಕ ವಿದ್ಯಾಭ್ಯಾಸ ಮಾಡಿದಳು. ಕನ್ನಡ, ಮರಾಠಿ, ಮೋಡ, ಸಂಸ್ಕೃತ, ಭಾಷೆಗಳನ್ನು ಕಲಿತಳು. ಅಂದಿನ ೪ನೇಯ ತರಗತಿಯವರೆಗಿನ ವಿದ್ಯಾಭ್ಯಾಸ ಮಾತ್ರ ನಿಂಗಮ್ಮಳಿಗೆ ದೊರೆತಿದೆ."[೩] ಆಗಿನ ಕೆಳಜಾತಿಯ ಸ್ತ್ರೀ ಪ್ರಾಥಮಿಕ ಶಿಕ್ಷಣ ಪಡೆದುಕೊಂಡಿರುವುದು ಹೆಮ್ಮೆಯ ವಿಷಯವಾಗಿದೆ. "ನಿಂಗಮ್ಮನ ತಾಯಿ ನಿಂಗಮ್ಮಳ ಸಂಗೀತದ ಆಸಕ್ತಿಯನ್ನು ಕಂಡು ಯಾದವಾಡದ ಯಾದವಾಡ ಮಲಕಪ್ಪರವರ ಬಳಿ ನಿಂಗಮ್ಮನನ್ನು ಸಂಗೀತ ಕಲಿಯುವುದಕ್ಕೆ ಬಿಟ್ಟಳಂತೆ"[೪] ನಿಂಗಮ್ಮ ಬಾಲ್ಯದಿಂದ ಸಂಗೀತದಲ್ಲಿ ವಿಶೇಷ ಪರಿಣಿತಿಯನ್ನು ಹೊಂದಿದ್ದಳು. ಹೀಗಾಗಿ ನಿಂಗಮ್ಮ ರಂಗಭೂಮಿಯನ್ನು ಪ್ರವೇಶ ಮಾಡಲು ಅವಕಾಶ ದೊರೆಯಿತು. "ನಿಂಗಮ್ಮ ಸಂಸ್ಕೃತ ಶ್ಲೋಕಗಳನ್ನು ಲೀಲಾಜಾಲವಾಗಿ ಹೇಳಿ, ಅವುಗಳ ಅರ್ಥವಿವರಣೆಯನ್ನು ಸಮರ್ಪಕ ರೀತಿಯಲ್ಲಿ ನೀಡುತ್ತಿದ್ದಳು."[೫]

ಒಟ್ಟಿನಲ್ಲಿ ನಿಂಗಮ್ಮನ ಬಾಲ್ಯ ಜೀವನದ ಕುರಿತು ವಿವರಗಳು ಅಸ್ಪಷ್ಟವಾಗಿದ್ದರೂ ಸಹ, ನಿಂಗಮ್ಮನ ತಾಯಿಯು ತನ್ನ ಸುತ್ತಲ ಪರಿಸರದಿಂದ ಮಗಳನ್ನು ದೂರವಿಡುವ ಮತ್ತು ಸಂಗೀತ ಕಲಿತು ಬೇರೆಯ ರಂಗದಲ್ಲಿ ಉನ್ನತಿ ಸಾಧಿಸಲೆಂದು ಹಂಬಲಿಸಿರುವುದು ಸ್ಪಷ್ಟವಾಗುತ್ತದೆ. ಅಲ್ಲದೆ ಸಹಜವಾಗಿಯೇ ಸಂಗೀತ ನೃತ್ಯಾದಿಗಳನ್ನು ಮೈಗೂಡಿಸಿಕೊಂಡು, ವಿವಿಧ ಭಾಷಿಕ ಪ್ರದೇಶಗಳಲ್ಲಿ ಅಲೆದು ಬಂದ ಡೊಂಬರ ಸಮುದಾಯಕ್ಕೆ ಕಲಾಭ್ಯಾಸ ಮತ್ತು ವಿದ್ಯಾಭ್ಯಾಸಗಳು ಸಹಜವಾಗಿಯೇ ಹತ್ತಿರವಾಗಿರುತ್ತವೆ. ನಿಂಗಮ್ಮ ಸಂಸ್ಕೃತವೂ ಸೇರಿ ನಾಲ್ಕೈದು ಭಾಷೆಗಳನ್ನು ಆಡುವುದಕ್ಕೆ, ಸಮುದಾಯದ ಅಲೆಮಾರಿತನದ ಹಿನ್ನೆಲೆಯೂ ಕೆಲಸಮಾಡಿದೆ. ಯಾದವಾಡ ಮಲಕಪ್ಪನ ಬಳಿ ನಿಂಗಮ್ಮ ತನ್ನ ಬಾಲ್ಯದಲ್ಲಿಯೇ ಸಂಗೀತ ಕಲಿಯಲು ತೊಡಗಿದಳು.

### ೨. ನಿಂಗಮ್ಮನ ವೈವಾಹಿಕ ಜೀವನ

ಕೌಜಲಗಿ ನಿಂಗಮ್ಮ ಚಿಕ್ಕ ವಯಸ್ಸಿನಿಂದ ಸಂಸ್ಕೃತ ಶ್ಲೋಕಗಳನ್ನು ಸ್ತುತಿಸುತ್ತಿದ್ದಳು. ಅವಳು ಆಧ್ಯಾತ್ಮಿಕವಾಗಿ ಹಾಗೂ ವೈಚಾರಿಕವಾಗಿ ಪ್ರಬುದ್ಧವಾಗಿದ್ದಳು. ನಿಂಗಮ್ಮ ಬ್ರಹ್ಮಚಾರಿಯಾಗಿದ್ದಳು ಎಂದು ಬಹುತೇಕರ ಅಭಿಪ್ರಾಯವಾಗಿದೆ. "ನಿಂಗಮ್ಮಳಿಗೆ ಕೌಟುಂಬಿಕ ಜೀವನದ ಬಗ್ಗೆ ಆಸಕ್ತಿ ಕಡಿಮೆಯಿತ್ತು. ಇವಳ ಹಾಡಿಗೆ ಮೆಚ್ಚಿ ಮರಳಾಗಿ ಬೆಳಗಾವಿಯ ಬೆಳಗಾವಿಯ ವಕೀಲರು ಇವಳನ್ನು ಮದುವೆಯಾದರು. ಉಚ್ಚ ಕುಲದ ವ್ಯಕ್ತಿಯೊಂದಿಗೆ ಜೀವನ ನಡೆಸುವುದು ತುಂಬ ದುಸ್ತರವಾಯಿತು. ದಾಂಪತ್ಯ ಜೀವನದಲ್ಲಿ ಬಿರುಕುಗಳು ಉಂಟಾದವು. ಇವರ ದಾಂಪತ್ಯ ಜೀವನ ಬಹುಕಾಲದವರೆಗೂ ಉಳಿಯಲಿಲ್ಲ."[೬]

ಕೌಟುಂಬಿಕ ಜೀವನದ ಬಗ್ಗೆ ವೈರಾಗ್ಯ ಉಂಟಾಗಿ ನಿಂಗಮ್ಮ ಬ್ರಹ್ಮಚಾರ ದೀಕ್ಷೆಯನ್ನು ಪಡೆದುಕೊಂಡಳು. ನಿಂಗಮ್ಮ ತುಂಬಾ ನಿಷ್ಠೆಯಿಂದ, ಶಿಸ್ತಿನಿಂದ ಬದುಕಿದವಳು. ನಿಂಗಮ್ಮ ಆಧ್ಯಾತ್ಮಿಕ, ವೈಚಾರಿಕ, ವಿಷಯಗಳ ಬಗ್ಗೆ ಹೆಚ್ಚು ತಿಳಿದುಕೊಂಡಿದ್ದಳು.

ಕೌಜಲಗಿಯಲ್ಲಿ ನಾನು ಕ್ಷೇತ್ರಕಾರ್ಯ ಮಾಡುತ್ತಿದ್ದಾಗ, ನಿಂಗಮ್ಮನ ಕೌಟುಂಬಿಕ ಜೀವನದ ಕುರಿತು ಅನೇಕ ಅಭಿಪ್ರಾಯಗಳು ವ್ಯಕ್ತವಾದವು. ನಿಂಗಮ್ಮ ಬದುಕಿದ್ದ ಮನೆಯ ಪಕ್ಕದ ವ್ಯಾಪಾರಿ ಪರಪ್ಪ ಗುರುಬಸಪ್ಪ ಅಂಗಡಿಯವರು "ಮೀರಾಬಾಯಿ ಹೇಗೆ ಕೃಷ್ಣ ನಾಮಸ್ಮರಣೆಯಲ್ಲಿ ಜೀವನ ಕಳೆದಳೋ ಹಾಗೆ ನಮ್ಮ ನಿಂಗಮ್ಮ ಕೂಡ ಕೃಷ್ಣ ತನ್ನ ಗಂಡ ಎಂದು ತಿಳಿದು ಕೃಷ್ಣನ ಆರಾಧನೆ ಮಾಡುತ್ತಿದ್ದಳು"[೭] ಎಂದರು.

"ನಿಂಗಮ್ಮ ಯಾವುದೇ ವ್ಯಾಮೋಹಕ್ಕೆ ಅಂಟಿಕೊಂಡವಳಲ್ಲ ಅವಳಿಗೆ ಯಾವಾಗಲೂ ಗಾಯನ ಸಂಗೀತ, ಪಾರಿಜಾತದ ಕಂಪನಿಯ ಬಗ್ಗೆ ಚಿಂತೆ ಮಾಡುತ್ತಿದ್ದಳು. ತನ್ನ ಸಂಸಾರವೆಂದರೆ ಪಾರಿಜಾತದ ಕಂಪನಿ ಮತ್ತು ಕಲಾವಿದರೇ ಅವಳಿಗೆ ಬಂಧುಗಳು. ನಿಂಗಮ್ಮಳ ವೈವಾಹಿಕ ಜೀವನದ ಬಗ್ಗೆ ಬರಗಿ ರಾಚಯ್ಯನವರು ಹೀಗೆ ಹೇಳುತ್ತಾರೆ. "ಕೃಷ್ಣ ಪರಮಾತ್ಮನ ಮ್ಯಾಗ ಗುಳದಾಳಿ ಕಟ್ಟಿದ್ದಾರೆ. ನಿಂಗಮ್ಮ ಖರ ಅಂದ್ರೆ ಆತ್ಮಶಕ್ತಿ ಇದ್ದ ಹೆಣ್ಣ ಮಗಳು. ಅವಳ ಬಗ್ಗೆ ಇಲ್ಲ. ಸಲ್ಲದ ಮಾತಾಡಿದವರ ಬಾಯಿಗೆ ಹುಳಾ ಬೀಳಾತವು"[೮] ಎಂದಿರುವುದು ನಿಂಗಮ್ಮನ ಕಟ್ಟುನಿಟ್ಟಿನ ಬದುಕಿಗೆ ಹಿಡಿದ ಕೈಗನ್ನಡಿಯಾಗಿದೆ.

ನಿಂಗಮ್ಮಳ ಹುಟ್ಟೂರಿನವರಾದ ಪತ್ರಿಕೋದ್ಯಮಿಯೊಬ್ಬರು ನಿಂಗಮ್ಮನ ಬಗ್ಗೆ ಎರಡು ಲೇಖನಗಳನ್ನು ಬರೆದಿದ್ದಾರೆ. ಇವರು ಬರಗಿ ರಾಚಯ್ಯನವರನ್ನು ಭೇಟಿಯಾಗಿ ಅವರ ಜೊತೆ ನಿಂಗಮ್ಮಳ ಕುರಿತು ಹಂಚಿಕೊಂಡ ವಿಷಯಗಳನ್ನು ತಿಳಿಸಿದರು.

ನಾಟ್ಯ ಕೋಗಿಲೆ, ನಾಟ್ಯ ಸರಸ್ವತಿ ದಿ. ಕೌಜಲಗಿ ನಿಂಗಮ್ಮನವರು ಪರಿಶುದ್ಧತೆಯನ್ನು ಕಾಯ್ದುಕೊಂಡು ಪಾರಿಜಾತದ ಮಹಾನ್ ಪುಷ್ಪವಾಗಿ ಶ್ರೀಕೃಷ್ಣ ಪರಮಾತ್ಮನ ಪಾದಕ್ಕೆ ತನ್ನನ್ನು ತಾನು ಸಮರ್ಪಿಸಿಕೊಂಡ ಮಹಾನ್ ಮಾತೇ ಅವರು. "ನಿಂಗಮ್ಮನವರ ನೀತಿವಂತಿಕೆ, ಕಲಾಪ್ರತಿಭೆ, ಪಾರಿಜಾತ ಭಕ್ತಿ, ಬ್ರಹ್ಮಚರ್ಯ ವರ್ಚಸ್ಸಿನ ಪ್ರಭಾವ ನಿಂಗಮ್ಮನಂತಹರು ಹುಟ್ಟುವುದು ಅಪರೂಪ ಎಂದು ನಾಡಿನ ಧೀಮಂತ ಕಲಾವಿದರಾಗಿದ್ದ ಕೌಜಲಗಿ ನಿಂಗಮ್ಮನವರ ಗರಡಿಯಲ್ಲಿ ಪಳಗಿದ್ದ ವಯೋವೃದ್ಧರಾಗಿದ್ದ ಶ್ರೀ ಬರಗಿ ರಾಚಯ್ಯನವರು ನಿಂಗಮ್ಮನವರನ್ನು ಸ್ಮರಿಸುತ್ತಿದ್ದರು."[೯]

೩. ಕೌಜಲಗಿ ನಿಂಗಮ್ಮನ ವಂಶಾವಳಿ




ಕೌಜಲಗಿ ನಿಂಗಮ್ಮ ಮಹಾಲಿಂಗಪುರದಲ್ಲಿ ನೆಲೆಸಿದ ಮೇಲೆ ನಿಂಗಮ್ಮ ಕೊನೆಗಾಲದವರಿಗೂ ಅಲ್ಲಿಯೇ ಉಳಿದಳು. ನಿಂಗಮ್ಮ ಧನ, ದಾನ್ಯ, ಸಂಪತ್ತಿಗೆ ಎಂದು ಆಸೆ ಪಡಲೇ ಇಲ್ಲ. ತನಗೆ ಮಕ್ಕಳು ಮರಿಗಳು ಇಲ್ಲದ ಕಾರಣ ನಿಂಗಮ್ಮ ವೈರಾಗ್ಯ ಜೀವನ ನಡೆಸುತಿದ್ದಳು. "ಆಕಸ್ಮಿಕವಾಗಿ ಸಿಕ್ಕ ಸಗರೆವ್ವ, ಅನಾಥ ಗರ್ಭಿಣ ಸ್ತ್ರೀ ಇವಳನ್ನು ಸಾಕತೊಡಗಿದಳು. ನಿಂಗಮ್ಮ ತನ್ನ ವಂಶ ಬೆಳೆಸುವುದಕ್ಕೋಸ್ಕರ ಸಗರೆವ್ವನ ಮಗಳು ಲಕ್ಷ್ಮೀಬಾಯಿಯನ್ನು ದತ್ತು ತೆಗೆದುಕೊಂಡು ಸಾಕಿದಳು. ಲಕ್ಷ್ಮೀಬಾಯಿ ಸಹ ಸತ್ಯಭಾಮಳ ಪಾತ್ರ ಮಾಡುತ್ತಿದ್ದಳಂತೆ. ಇವಳಿಗೆ ಅವರಾದಿಯ ಬಡಿಗ ಮನೆತನದವನೊಬ್ಬನೊಂದಿಗೆ ಮದುವೆಯಾಗಿತ್ತು."[೧೦] "ಲಕ್ಷ್ಮೀಬಾಯಿಯ ಮಕ್ಕಳಾದ ಚಂದ್ರವ್ವ ಮತ್ತು ಮಹಾದೇವಪ್ಪ ಕೌಜಲಗಿ, ಚಂದ್ರವ್ವ ಕೌಜಲಗಿ ಹಿರಿಯವಳು. ಚಂದ್ರವ್ವ ಕೌಜಲಗಿ ನಿಂಗಮ್ಮನ ತರುವಾಯ ಈ ಕಂಪನಿಯಲ್ಲಿ ನಡೆಸಿಕೊಂಡು ಬಂದಿದ್ದಾಳೆ."[೧೧] ನಿಂಗಮ್ಮನ ತರುವಾಯ ಈ ಭಾಗದಲ್ಲಿ ಪಾರಿಜಾತದ ಜೊತೆ ಕೇಳಿ ಬರುವ ಇನ್ನೊಂದು ಚಂದ್ರವ್ವಳದು. ಚಂದ್ರವ್ವನ ಅಭಿನಯ ನೋಡಿದ ವ್ಯಕ್ತಿಗಳು ಚಂದ್ರವ್ವ ತುಂಬ ಸೌಮ್ಯ ಹಾಗೂ ರೂಪಾವತಿ, ವಿಶೇಷ ಪರಿಣಿತ ಹೊಂದಿದ ರಂಗನಟಿಯಾಗಿದ್ದಳು ಎಂದು ಹೇಳುತ್ತಾರೆ.

"ಚಂದ್ರವ್ವಳ ಅಭಿನಯ ನೋಡಿದವರು ಹೀಗೆ ಹೇಳುತ್ತಾರೆ. ನನಗೆ ಆಗ ೨೦ ವರ್ಷ ವಯಸ್ಸಿರಬಹುದು. ಆಗ ತಾನೆ ಮದುವೆಯಾಗಿತ್ತು. ಸಿನಿಮಾ ನೋಡಿ ಬರುವುದಕ್ಕೆ ಹೋದಾಗ ಸಿನಿಮಾ ಬಿಟ್ಟು ಪಾರಿಜಾತ ನೋಡಿಬಂದವು ಚಂದ್ರಮ್ಮ ಸತ್ಯಭಾಮ ಪಾತ್ರವಹಿಸಿದ್ದಳು. ಪಾತ್ರ ಹಾಕಿದಾಗ ಚಂದ್ರಮ್ಮ ಗಂಭೀರ ಹಾಗೂ ಠೀವಿಯಿಂದ ಇರುತ್ತಿದ್ದಳು. ಅವಳು ಸಹಜವಾಗಿಯೇ ತುಂಬ ಸೌಮ್ಯ ಸರಳ ಗುಣಗಳನ್ನು ಹೊಂದಿದ್ದಳು."[೧೨]

ಚಂದ್ರವ್ವಳ ಜೊತೆಯಲ್ಲಿ ಇವಳ ತಮ್ಮ ಮಹಾದೇವಪ್ಪ ಕೌಜಲಗಿ ಹಾರ್ಮೋನಿಯಂ ಬಾರಿಸುತ್ತಿದ್ದನು. ಹಾಗೂ ಮಹಾದೇವಪ್ಪನನ್ನು ಹಾರ್ಮೋನಿಯಂ ನುಡಿಸುವುದರಲ್ಲಿ ಮೀರಿಸುವರು ಯಾರು ಇರಲಿಲ್ಲ. ಚಂದ್ರವ್ವ ತೀರಿಕೊಂಡ ನಂತರ ಮಹಾದೇವಪ್ಪನೇ ಕಂಪನಿಯನ್ನು ನಡೆಸಿಕೊಂಡು ಬಂದನು. ಇವರ ಕಾಲದಲ್ಲಿ ಈ ಕಂಪನಿ ತುಂಬ ಹೆಸರು ಪಡೆದುಕೊಂಡಿತು.

ಮಹಾದೇವಪ್ಪನ ಮರಣದ ನಂತರ ಕಂಪನಿಯ ಜವಾಬ್ದಾರಿಯನ್ನು ವಹಿಸಿಕೊಂಡಿದ್ದು ಇವರ ಮಗ ನಿಂಗಪ್ಪ ಕೌಜಲಗಿ. ನಿಂಗಪ್ಪ ಮೊದಲಿಗೆ ಪಾತ್ರಗಳನ್ನು ಮಾಡುತ್ತಿದ್ದರಂತೆ. ನಂತರ ಕಂಪನಿಯ ಮಾಲಿಕತ್ವ ವಹಿಸಿಕೊಂಡು ಇವರ ನೇತೃತ್ವದಲ್ಲಿ ಆಟ ಆಡುಸುತ್ತಿದ್ದರಂತೆ ಹಾಗೂ ಹಾರ್ಮೋನಿಯಂ ಸಹ ನುಡಿಸುತ್ತಿದ್ದರು. ಇವರ ನೇತೃತ್ವದಲ್ಲಿ ನಡೆದ ನಾಟಕದ ಪಾತ್ರಧಾರಿಗಳು.

೧. ನಿಂಗಪ್ಪ ಕೌಜಲಗಿ - ಹಾರ್ಮೋನಿಯಂ ಹಾಗೂ ಕಂಪನಿಯ ಮಾಲಿಕರು

೨. ರಾಮಣ್ಣ - ತಬಲವಾದಕರು

೩. ಚಂದ್ರಸಾಬ್ - ತಳವಾದಕರು

೪. ಮಹಾದೇವಪ್ಪ ಚಾಮ್ಮಡ್ - ಭಾಗವತ್

೫. ಶಂಕರಪ್ಪ ಭಜತ್ರೆ - ಮರಿಭಾಗವತ್

೬. ಯಲ್ಲಪ್ಪ - ಶ್ರೀಕೃಷ್ಣ

೭. ಬಾಲಬಾಯಿ ಹಿಡಿಕಲ್ - ಸತ್ಯಭಾಮ

೮. ರೇಣುಕಬಾಯಿ ಮಲಪುರ - ರುಕ್ಮಿಣಿ

೯. ಗೌಳಪ್ಪ ಥೋಡಕಟ್ಟಿ - ಹಿನ್ನೆಲೆ ಗಾಯಕ

ನಿಂಗಪ್ಪ ಕುಡಿತದ ಚಟಕ್ಕೆ ಬಲಿಯಾಗಿ ತೀರಿಕೊಂಡರು. ನಿಂಗಮ್ಮಳ ಬಗ್ಗೆ ಅಪಾರ ಗೌರವವುಳ್ಳ

ಹಾಗೂ ಚಂದ್ರವ್ವಳ ಕಾಲದಿಂದ ಇತ್ತೀಚಿನ ಕಾಲದ ಮಹಾದೇವಪ್ಪನವರಿಗೆ ಈ ಕುಟುಂಬವನ್ನು ಹತ್ತಿರದಿಂದ ನೋಡಿದ ಹೆಚ್.ಎಲ್. ಕಲಾಲ್ ಹೀಗೆ ಹೇಳುತ್ತಾರೆ. "ಒಳ್ಳೆಯ ಕಲಾವಿದರು, ಹುಟ್ಟು ಪ್ರತಿಭಾವಂತರು. ಆದರೆ ಇವರ ಕುಡಿತ ಅವರ ಕಲೆಯನ್ನು ನುಂಗಿಹಾಕಿದೆ. ಸಿಗಬೇಕಾದ ಕೀರ್ತಿ ಲಭಿಸಲಿಲ್ಲ"[೧೪] ಎಂದು ಅಭಿಪ್ರಾಯ ಪಡುತ್ತಾರೆ. ನಿಂಗಪ್ಪನ ಮರಣದ ನಂತರ ಕಮಲವ್ವ ಕಂಪನಿಯ ಹೊಣೆ ಹೊತ್ತಳು. ಹಾಗೂ ಇವಳ ಮಗ ಮಹಾದೇವಿ ಜೊತೆಗೂಡಿ ಕಂಪನಿಯನ್ನು ನಡೆಸಿಕೊಂಡು ಹೋಗುತ್ತಿದ್ದಾರೆ. ಕಮಲವ್ವ ಸು. ೧೬ ವರ್ಷಗಳಿಂದ ರಂಗಸೇವೆ ಮಾಡುತ್ತಾ ಬಂದಿದ್ದಾಳೆ. ಕಮಲವ್ವನಿಗೆ ಇಬ್ಬರು ಗಂಡುಮಕ್ಕಳು. ಹಿರಿಯ ಮಗ ಮಹಾದೇವ, ಕಿರಿಯವನು ವಿಷ್ಣು. ಮಹಾದೇವ ಸಹ ತನ್ನ ೧೪ನೆಯ ವರ್ಷದಿಂದ ಆಟದಲ್ಲಿ ಪಾತ್ರವಹಿಸುತ್ತಿದ್ದಾನೆ. ನಂತರ ಇತ್ತೀಚಿನ ದಿನಗಳಲ್ಲಿ ತಾಳ ಹಾಕುತ್ತಾನೆ. ಇವರು ವಂಶ ಪರಂಪರೆಯಾಗಿ ಕಲೆಯನ್ನು ಬೆಳೆಸಿಕೊಂಡು ಬಂದಿದ್ದಾರೆ. ಕಲಾ ಆರಾಧನೆ ತಮ್ಮ ಉಸಿರೆಂದೇ ಇವರು ಭಾವಿಸಿದ್ದಾರೆ.

ಕೌಜಲಗಿಯಲ್ಲಿರುವ ನಿಂಗಮ್ಮನ ತಂಗಿಯ ಮೊಮ್ಮಗ "ನಿಂಗಮ್ಮಳಿಗೆ ಒಬ್ಬಳು ತಂಗಿ ಇದ್ದಳಂತೆ. ಬಡಕ್ಕಮ್ಮ ಹಾಗೂ ಒಬ್ಬ ತಮ್ಮ ಅಚಾಳಪ್ಪ."[೧೫] ನಮ್ಮ ಅಜ್ಜಿ ನಮ್ಮ ಮನೆಗೆ ಆಗಾಗ ಬರುತ್ತಿದ್ದರು. ಕೌಜಲಗಿಯಲ್ಲಿರುವ ಮನೆ ಮತ್ತು ಹೊಲವನ್ನು ತನ್ನ ತಮ್ಮನಿಗೆ ಬಿಟ್ಟುಕೊಟ್ಟು ರಂಗಸೇವೆಯಲ್ಲಿ ನಿರಂತರಾಗಿದ್ದ ಅವರು ಇತ್ತ ಕಡೆ ಗಮನಹರಿಸಲಿಲ್ಲ. ಆಗಾಗ ಹೆಚ್ಚು ಅವರ ಸಂಪರ್ಕದಿಂದ ದೂರವುಳಿದರು.

## ೪. ಕೌಜಲಗಿ ನಿಂಗಮ್ಮ ಮತ್ತು ಅವಳ ಸಮುದಾಯ

ಕೌಜಲಗಿ ನಿಂಗಮ್ಮ ಅಲೆಮಾರಿ ಸಮುದಾಯದ ಡೊಂಬರ ಕುಟುಂಬದಲ್ಲಿ ಹುಟ್ಟಿದವಳು. ನಿಂಗಮ್ಮಳ ಕಾಲದಿಂದಲೂ ಈ ಸಮುದಾಯ ಮೇಲ್ವರ್ಗದವರ ತುಳಿತಕ್ಕೆ ಒಳಗಾಗುತ್ತಲೇ ಇದೆ. ಸಾಮಾನ್ಯವಾಗಿ ಡೊಂಬರು ಊರಿನಿಂದ ಊರಿಗೆ ಅಲೆಯುತ್ತ, ತಮ್ಮ ಡೊಂಬರ ಕಲೆಯನ್ನು ಪ್ರದರ್ಶನ ನೀಡುತ್ತ ಬಂದವರು. ಉತ್ತರ ಕರ್ನಾಟಕದಲ್ಲಿ ಇರುವ ಡೊಂಬರು ಮಹಾರಾಷ್ಟ್ರದಿಂದ ಬಂದವರು ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

"ಕೌಜಲಗಿ ನಿಂಗಮ್ಮ ಡೊಂಬರ ವೃತ್ತಿಯನ್ನು ಅವಲಂಬಿಸಿದ ಕುಟುಂಬದಲ್ಲಿ ಜನಿಸಿದವಳು."[೧೬] ಈ ಸಮುದಾಯ ಆರ್ಥಿಕವಾಗಿ ತುಂಬು ಹಿಂದುಳಿದ ಸಮುದಾಯವಾಗಿದೆ. ಅನೇಕ ಸಾಮಾಜಿಕ ಅವಮಾನಗಳಿಗೆ ಒಳಗಾದ ಈ ಸಮುದಾಯವನ್ನು ಅಂದು ಅಸ್ಪೃಶ್ಯರಂದೇ ಗುರುತಿಸುತ್ತಿದ್ದರು. ಮೇಲ್ವರ್ಗದವರು ತಮ್ಮ ಆಳ್ವಿಕೆಯಲ್ಲಿ ಕೆಳಜಾತಿಗಳನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿದ್ದರು.

ಕೆಳಜಾತಿಯ ಸ್ತ್ರೀಯರನ್ನು ತಮ್ಮ ಮೋಜಿಗಾಗಿ ಹಾಗೂ ತಮ್ಮ ವಿಲಾಸ ಜೀವನಕ್ಕಾಗಿ, ಮೇಲ್ಜಾತಿಗಳು ಬಳಸುತ್ತಿದ್ದ ಕಾಲಘಟ್ಟವದು. ಕೆಳಜಾತಿಯ ಮಹಿಳೆಯನ್ನು ಬಳಸುವ ಈ ಪದ್ಧತಿಯು ಪರಂಪರೆಯಾಗಿ ಹರಿದು ಬಂದಿದೆ. ಸಂಸ್ಕೃತಿಯ ಹೆಸರಲ್ಲಿ ಕೆಳಜಾತಿಯ ಸ್ತ್ರೀಯರ ಶೋಷಣೆ ನಿರತಂರವಾಗಿ ನಡೆಯುತ್ತಿದೆ. ಸಹಜವಾಗಿಯೇ ನಿಂಗಮ್ಮನಿಗೆ ಸಂಗೀತ ಮತ್ತು ಅಭಿನಯದ ಕೌಶಲಗಳು ಸಿದ್ಧಿಯಾಗಿದ್ದವು. ಏಕೆಂದರೆ ಡೊಂಬರ ಸಮುದಾಯವು ಪ್ರದರ್ಶನ ಕಲೆಗಳನ್ನೇ ನಂಬಿಕೊಂಡು ಬಂದ ಸಮುದಾಯವಾಗಿದೆ. ಬೀದಿಯಲ್ಲಿ ಡೊಂಬರಾಟ ಮಾಡುವಾಗ ಡೊಂಬತಿಯರು ತಮ್ಮ ಹಾಡು, ನೃತ್ಯಗಳಿಂದ ಜನರನ್ನು ರಂಜಿಸಬೇಕಿತ್ತು. ತಮ್ಮನ್ನು ತಾವು ಪ್ರದರ್ಶನದ ವಸ್ತುವನ್ನಾಗಿಸಿಕೊಳ್ಳಲು, ಜನರನ್ನು ರಂಜಿಸಲು ಈ ಸಮುದಾಯದ ಹೆಣ್ಣುಗಳಿಗೆ ನೃತ್ಯ ಮತ್ತು ಹಾಡುಗಾರಿಕೆಗಳು ಅನಿವಾರ್ಯವಾಗಿದ್ದವು ಸಹ. ಡೊಂಬರಾಟದ ಒಂದು ಅವಿಭಾಜ್ಯ ಅಂಗವಾಗಿದ್ದ ಸಂಗೀತ ಮತ್ತು ನೃತ್ಯಗಳು ನಿಂಗಮ್ಮನಿಗೆ ಅವಳ ವಂಶವಾಹಿಯಲ್ಲಿ ಸಹಜವಾಗಿಯೇ ದತ್ತವಾಗಿದ್ದವು. ನಿಂಗಮ್ಮ ಒಬ್ಬ ದೊಡ್ಡ ಕಲಾವಿದೆಯಾಗಿ ರೂಪಗೊಳ್ಳಲು ಅವಳ ಸಮುದಾಯದ ಈ ಬಗೆಯ ಹಿನ್ನೆಲೆಯೂ ಕಾರಣವಾಗಿದೆ. ಅಲ್ಲದೆ, ಶ್ರೇಣೀಕರಣದ ಕಾರಣಗಳಿಗಾಗಿ ಸಾಮಾಜಿಕ ಅವಮಾನಗಳನ್ನು ನಿರಂತರವಾಗಿ ಅನುಭವಿಸಿದ್ದ ನಿಂಗಮ್ಮನ ಕೌಟುಂಬಿಕ ಹಿನ್ನೆಲೆಯು, ನಿಂಗಮ್ಮನನ್ನು ಒಂದು ಮಹತ್ತರ ಗುರಿಯ ಕಡೆಗೆ ಚಲಿಸುವಂತೆ ಮಾಡಿತು. ನಿಂಗಮ್ಮನ ತಾಯಿ ತನ್ನ ಮಗಳು ಓಕುಳಿಯನ್ನು ಎರಚಿಸಿಕೊಳ್ಳದೆ ಸಮಾಜದಲ್ಲಿ ದೊಡ್ಡ ಹೆಸರು ಮಾಡಬೇಕೆಂಬ ಆಸೆ ಹುಟ್ಟಿದ್ದು ಸಹ ಅವಳ ಸಮುದಾಯಿಕ ಆಶಯಗಳ ಹಿನ್ನೆಲೆಯಲ್ಲಿಯೇ. ನಿಂಗಮ್ಮ ಒಬ್ಬ ಕಲಾವಿದೆಯಾಗಿ ರೂಪಗೊಳ್ಳುವ ಹಿನ್ನೆಲೆಯಲ್ಲಿ ಈ ಬಗೆಯ ಜೈವಿಕ ಮತ್ತು ಸಾಮುದಾಯಿಕ ಕಾರಣಗಳು ಮಹತ್ವದ ಪಾತ್ರ ವಹಿಸುತ್ತವೆ. ಯಾವುದೇ ಕಲಾವಿದ ಶೂನ್ಯದಲ್ಲಿ ಸೃಷ್ಟಿಯಾಗುವುದಿಲ್ಲ. ಕಲಾವಿದನ ಹಿಂದೆ ಈ ಬಗೆಯ ಅನೇಕ ವಿಭಿನ್ನ ಕಾರಣಗಳು ಕೆಲಸ ಮಾಡಿರುತ್ತವೆ. ಒಬ್ಬ ಸೃಜನಶೀಲನು ಹೀಗೆ ತನ್ನ ಜೈವಿಕ ಮತ್ತು ಸಾಮುದಾಯಿಕ ಆಶಯಗಳ ಹಿನ್ನೆಲೆಯಲ್ಲಿಯೆ ರೂಪಗೊಂಡಿರುತ್ತಾನೆ. ಕಲೆಗೆ ತನ್ನದೇ ಆದ ಪರಿಶುದ್ಧ ಶಾಸ್ತ್ರೀಯ ಚಲನೆಗಳೇನಿರುವುದಿಲ್ಲ. ರನ್ನನ ದುರ್ಯೋಧನ, ಪಂಪನ ಕರ್ಣ ಇದ್ದಕ್ಕಿದ್ದಂತೆ ಮಾನವೀಯ ವ್ಯಕ್ತಿಗಳಾಗಿ ರೂಪುಗೊಳ್ಳಲು ಕಾರಣ, ರನ್ನ ಮತ್ತು ಪಂಪನನ್ನು ರೂಪಿಸಿದ ಸಮುದಾಯಗಳ ವೈಚಾರಿಕ ಹಿನ್ನೆಲೆಗಳೇ ಕಾರಣ. ಪಂಪನಷ್ಟು ಪ್ರತಿಭಾವಂತನಲ್ಲದಿದ್ದರೂ, ರನ್ನ ತನ್ನ ಕಾವ್ಯವನ್ನು ಓದಲು ಎಂಟೆದೆ ಬೇಕು ಎನ್ನುವಾಗ, ಅವನು ಅಕ್ಷರ ಕಲಿಯಲು ಹತಾಶನಾಗಿ ವೈದಿಕ ಮನೆಬಾಗಿಲುಗಳಿಗೆ ಅಲೆದ ಅವಮಾನದ ಸಂಗತಿಗಳೆಲ್ಲ ಕೆಲಸ ಮಾಡಿರುತ್ತವೆ. ಯಾವುದೇ ಸೃಜನಶೀಲ ವ್ಯಕ್ತಿತ್ವವು ತನ್ನ ಸಾಮಾಜಿಕ ಆರ್ಥಿಕ ನೆಲೆಗಳಿಂದಲೇ ಸ್ಫೂರ್ತಿಗೊಂಡು ವಿಕಾಸವಾಗುತ್ತದೆ. ವ್ಯಷ್ಟಿ ಪ್ರಜ್ಞೆಯೊಂದು ಸಮಷ್ಟಿ ತಿಳುವಳಿಕೆಯ ಜೊತೆ ನಡೆಸುವ ಅತ್ಯಂತ ಮಹತ್ವದ ಮುಖಾಮುಖಿ ಇದು. ಸಮುದಾಯದ ಆಳದಲ್ಲಿನ

ಸಮಗ್ರ ತಿಳುವಳಿಕೆಯನ್ನು ಹೀರಿಯೇ ವ್ಯಕ್ತಿತ್ವೊಂದು ಹೊರ ಜಗತ್ತಿನಲ್ಲಿ ಸಾರ್ಥಕ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುತ್ತದೆ. ಈಗ ನಮ್ಮ ನಡುವೆ ಸಂಕೇತಿಕವಾಗಿ ಬದುಕಿರುವ ಮಂಟೇಸ್ವಾಮಿ, ಮಾದೇಶ್ವರನಂತಹ ವ್ಯಕ್ತಿಗಳು ಇದೇ ನೆಲೆಯಲ್ಲಿ ರೂಪಗೊಂಡಂತವರು. ಸಮುದಾಯಗಳ ಕೊರಳುಗಳಿಗೆ ಗಟ್ಟಿ ದನಿಯಾಗಿ ಹೊರಹೊಮ್ಮಿದವರು. ಇದನ್ನೇ ಸುಬ್ಬಣ್ಣನವರು ಹೀಗೆ ವಿವರಿಸುತ್ತಾರೆ. "ಈಟಿಗೆ ಮೊನೆ ಇರುವ ಹಾಗೆ, ಹಾಲಿಗೆ ಕೆನೆ ಇರುವ ಹಾಗೆ ಜನ ಸಮುದಾಯದಲ್ಲಿ ಪ್ರತಿಭಾವಂತ ನಾಯಕ ಮನಸ್ಸುಗಳಿರುತ್ತವೆ. ಅವು ಮತ್ತೆ ಮತ್ತೆ ಜಡ್ಡುಗೊಳ್ಳುತ್ತಲೇ ಇರುವ ಸಮುದಾಯವನ್ನು ಕೆದರಿ, ಕಲಕಿ, ಕೆಣಕಿ ಮತ್ತೆ ಜೀವಂತಗೊಳಿಸುತ್ತಿರುತ್ತವೆ. ವಿವೇಕವೆನ್ನುವುದು ಈ ಪ್ರತಿಭಾವಂತರು ಎಲ್ಲೋ ಉತ್ಪಾದನೆ ಮಾಡಿ ತಂದು ಹಂಚುವ ಪದಾರ್ಥವಲ್ಲ. ಅದು ವ್ಯಕ್ತಿ ಪ್ರಜ್ಞೆಯಲ್ಲೂ ಸಮುದಾಯ ಪ್ರಜ್ಞೆಯಲ್ಲೂ ಆಳವಾಗಿ, ಸುಪ್ತವಾಗಿ ಇರುವಂಥದೇ. ಅದು ಶೋಧಿತವಾಗಬೇಕು. ಅನಾವರಣಗೊಳ್ಳಬೇಕು. ಸಮುದಾಯದಲ್ಲಿನ ಹೆಚ್ಚು ಸಂವೇದನಾಶೀಲವಾದ ನಾಯಕ ಮನಸ್ಸುಗಳು ತಮ್ಮ ಸೃಜನಶೀಲತೆಯಿಂದ ಸಮುದಾಯವನ್ನು ಕಡೆದು ಕಲಕುತ್ತವೆ. ಉತ್ಕೃಷ್ಟಗೊಳಿಸುತ್ತವೆ. ವಿವೇಕದ ಅನಾವರಣಕ್ಕೆ ದಾರಿ ಮಾಡಿಕೊಡುತ್ತವೆ."[೧೭]

ನಿಂಗಮ್ಮ ತನ್ನ ಸಮುದಾಯದ ಸಮಷ್ಟಿ ಪ್ರಜ್ಞೆಯ ಒಂದು ಭಾಗವಾಗಿ ರೂಪಗೊಂಡವಳು. ತನಗೆ ಮತ್ತು ತನ್ನ ಸಮುದಾಯಕ್ಕೆ ಲೌಕಿಕದಲ್ಲಿ ಒಂದು ಸಾರ್ಥಕ ಅಸ್ತಿತ್ವವನ್ನು ಕಲ್ಪಿಸಿದವಳು. ಸಮುದಾಯ ಪ್ರಜ್ಞೆಯು ಹೀಗೆ ಪ್ರತಿಭಾವಂತ ವ್ಯಕ್ತಿತ್ವವೊಂದರ ಮೂಲಕ ಸೃಜನಶೀಲ ಆಯಾಮದಲ್ಲಿ ತನ್ನನ್ನು ಸಾರ್ಥಕ ಪಡಿಸಿಕೊಂಡಿರುವುದಕ್ಕೆ ನಿಂಗಮ್ಮ ಜ್ವಲಂತ ಉದಾಹರಣೆಯಾಗಿದ್ದಾಳೆ.

## ಆ. ಅಂದಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಒತ್ತಡಗಳು

ಕೌಜಲಗಿ ನಿಂಗಮ್ಮ ಒಬ್ಬ ಕಲಾವಿದೆಯಾಗಿ ರೂಪುಗೊಳ್ಳುವುದಕ್ಕೆ ವೈಯಕ್ತಿಕ ಅನಿವಾರ್ಯತೆಗಳು ಹೇಗೆ ಕಾರಣವಾಗಿವೆಯೋ, ಆ ಅನಿವಾರ್ಯತೆಗಳು ಸೃಷ್ಟಿಯಾಗಿದ್ದು ಅವಳ ಸಾಮಾಜಿಕ ಹಿನ್ನೆಲೆಯಿಂದಲೇ. ಡೊಂಬರ ಸಮುದಾಯವು ಶ್ರೇಣೀಕರಣದ ಕಾರಣಕ್ಕಾಗಿ ಅನುಭವಿಸುತ್ತಿದ್ದ ಅವಮಾನಗಳು ಮತ್ತು ಸಮಕಾಲೀನ ಒತ್ತಡಗಳು ನಿಂಗಮ್ಮನನ್ನು ಒಬ್ಬ ಅಪೂರ್ವ ಕಲಾವಿದೆಯನ್ನಾಗಿಸಿದವು. ಇದರಲ್ಲಿ ಮುಖ್ಯವಾಗಿ ಸಾಮಾಜಿಕ ಒತ್ತಡಗಳು ನಿಂಗಮ್ಮನನ್ನು ಒಬ್ಬ ಅಭಿಜಾತ ಕಲಾವಿದೆಯಾಗಿ ರೂಪುಗೊಳ್ಳಲು ಕಾರಣವಾದವು. ಯಾವ ಬಗೆಯ ಸ್ವಾತಂತ್ರ್ಯಗಳೂ ಇರದ, ಸಾಮಾಜಿಕ ಅಧಿಕಾರಗಳೂ ಇರದ ಪರಿಸ್ಥಿತಿಯಲ್ಲಿ ಕೌಜಲಗಿ ನಿಂಗಮ್ಮ ಪ್ರಾಥಮಿಕ ಶಿಕ್ಷಣ ಪಡೆದುಕೊಂಡಿರುವುದು, ಒಂದು ಆಶ್ಚರ್ಯಪಡುವ ಸಂಗತಿಯಾಗಿದೆ. ಅಂದಿನ ಪುರುಷ ಪ್ರಧಾನ ಸಮಾಜವು ಕೆಳವರ್ಗದ ಸ್ತ್ರೀಯರನ್ನು ತಮ್ಮ ಭೋಗದ ಜೀವನಕ್ಕೆ ಒಗ್ಗಿಸಿಕೊಳ್ಳಲು ಧಾರ್ಮಿಕ ನೆಲೆಯಲ್ಲಿ ಅನೇಕ ಹುನ್ನಾರುಗಳನ್ನು ಮಾಡುತಿದ್ದ ಕಾಲವದು.

ಅಂದಿನ ಸಮಾಜದಲ್ಲಿ ದೇವದಾಸಿ ಪದ್ಧತಿ ಪ್ರಚಲಿತದಲ್ಲಿತ್ತು. ದೇವಸ್ಥಾನಗಳೊಂದಿಗೆ ಸಂಬಂಧ ಹೊಂದಿರುವ ನರ್ತಕಿಯರು ಮತ್ತು ಹಾಡುಗಾರ್ತಿಯರನ್ನು ಅಂದಿನ ಸಮಾಜ ರೂಪಿಸಿತ್ತು. "ದೇವದಾಸಿಯರು ಎಂದರೆ ದೇವತೆಯ ಹೆಣ್ಣಾಳುಗಳು ಎಂದು ಹೆಸರಿಸುವುದು ಸಾಮಾನ್ಯ ವಾಡಿಕೆ. ಅವರೊಂದು ಬಗೆಯ ಅಪರೂಪದ ಮಹಿಳೆಯರ ಗುಂಪು ಎಂದು ವಿಶೇಷವಾಗಿ ಗುರುತಿಸಲ್ಪಟ್ಟಿದ್ದಾರೆ. ದೇವಸ್ಥಾನಕ್ಕೆ ಅರ್ಪಿಸಿಕೊಂಡ ಅವರು ನಡೆಸುವ ಸೇವೆಯನ್ನು ದೇವತೆಯೊಂದಿಗೆ ನಡೆದ ಮದುವೆಯೆಂದು ಪರಿಗಣಿಸಲಾಗುತ್ತಿದೆ. ಅವರು ಯಾವ ಗಂಡನನ್ನು ಮದುವೆಯಾಗುವ ಹಾಗಿಲ್ಲ ಈ ಒಂದು ಪದ್ಧತಿ ಕೆಳಜಾತಿಯ ಸ್ತ್ರೀಯರನ್ನು ವೇಶ್ಯಾವೃತ್ತಿಗೆ ತಳ್ಳುವ ವ್ಯವಸ್ಥೆಯಾಗಿದೆ."[೧೮] ಸಾಮಾನ್ಯವಾಗಿ ಉತ್ತರ ಕರ್ನಾಟಕದಲ್ಲಿ ಕಂಡುಬರುವ ಓಕುಳಿ ಮತ್ತು ಎಲ್ಲಮ್ಮ ದೇವತೆಯ ಆರಾಧನೆ ಈ ಎರಡು ಪರಂಪರೆಯಲ್ಲಿ ದೇವದಾಸಿ ಪದ್ಧತಿ ಬೆಳೆದುಕೊಂಡು ಬಂದಿವೆ.

ಈವತ್ತು ಸಹ ದೇವದಾಸಿ ಪದ್ಧತಿಯು ಕರ್ನಾಟಕದಲ್ಲಿ ಅದರಲ್ಲೂ ಉತ್ತರ ಕರ್ನಾಟಕದಲ್ಲಿ ಇನ್ನೂ ಅಸ್ತಿತ್ವದಲ್ಲಿದೆ. ಕೆಲವು ಸಲ ಮೇಲ್ವರ್ಗಗಳ ಒತ್ತಡಗಳಿಲ್ಲದೆಯೂ ಕೆಲವು ಸಮುದಾಯಗಳು ತಮ್ಮ ಹೆಣ್ಣುಗಳನ್ನು ದೇವರಿಗೆ ಬಿಡುವ ಸಂಪ್ರದಾಯವನ್ನು ಆಚರಿಸುತ್ತಾ ಬಂದಿವೆ. ನಿಂಗಮ್ಮನ ತಾಯಿ ಓಕುಳಿ ಆಚರಣೆಯಲ್ಲಿ ಪಾಲ್ಗೊಳ್ಳುತ್ತಿದ್ದ ಕಾರಣಕ್ಕಾಗಿ ಅಂದು ಅವಳ ಕುಟುಂಬಕ್ಕೆ ಅಂತಹ ಸಾಮಾಜಿಕ ಸ್ಥಾನಮಾನಗಳೇನೂ ದತ್ತವಾಗಿರಲಿಲ್ಲ. ನಿಂಗಮ್ಮ ವಂಶಪಾರಂಪರ್ಯವಾಗಿ ಓಕುಳಿ ಆಚರಣೆಯಲ್ಲಿ ಭಾಗವಹಿಸಲು ಸಿದ್ಧಳಾಗಲೇ ಬೇಕಾದ ಅನಿವಾರ್ಯತೆಯೂ ಇತ್ತು.

## ೧. ದೇವದಾಸಿ ಪದ್ಧತಿ

### ೧.೧. ಓಕುಳಿ ಆಚರಣೆ

ಉತ್ತರ ಕರ್ನಾಟಕದಲ್ಲಿ ಓಕುಳಿ ಆಚರಣೆ ತುಂಬ ಪ್ರಸಿದ್ಧವಾದದ್ದು. ಯುಗಾದಿ ನಂತರ ಹನುಮಂತನ ಜಾತ್ರೆ ಸಮಯದಲ್ಲಿ ಈ ಆಚರಣೆ ಜರುಗುತ್ತದೆ. ಊರ ದೇವದಾಸಿಯರಿಗೆ ಜಾತ್ರೆಯ ಹಿಂದಿನ ದಿನವೇ ವೇಶ್ಯ ಕೊಟ್ಟು ಹೇಳಲಾಗಿರುತ್ತದೆ. ಜೊತೆಗೆ ಓಕುಳಿಯ ಬೆತ್ತವನ್ನು ತರುವಂತೆ ಹೇಳುತ್ತಾರೆ. ಜಾತ್ರೆಯ ಮುಂಜಾನೆ ಹನುಮಂತ ದೇವರ ಗುಡಿಯನ್ನ ತೊಳೆದು ನಂತರ ಗುಡಿಮುಂದೆ ಇರುವ ಹೊಂಡವನ್ನು ತೊಳೆದು ಅದಕ್ಕೆ ಅರಿಷಣ ನೀರು ತುಂಬುತ್ತಾರೆ. ನಂತರ ಅದಕ್ಕೆ ಸಂಪ್ರದಾಯದಂತೆ ಪೂಜೆ ಮಾಡುತ್ತಾರೆ. ನಂತರ ಮೇಲ್ಜಾತಿಯ ಪುರೋಹಿತ, ಕೆಳಜಾತಿಯ ಸ್ತ್ರೀಯರಿಗೆ ನೀರನ್ನು ಉಗ್ಗುತ್ತಾರೆ. ಈ ನೀರು ಯಾರು ಉಗ್ಗಿಸಿಕೊಳ್ಳುತ್ತಾರೋ ಆದಿನ ರಾತ್ರಿ ಅವಳು ಮೇಲ್ಜಾತಿಯ ಪುರುಷನ ಜೊತೆ ಇರಬೇಕು. ನಂತರ ಇವಳು ಯಾರನ್ನೂ ವಿವಾಹವಾಗುವಂತಿಲ್ಲ. ಅವಳು ದೇವದಾಸಿ ಆಗುತ್ತಾಳೆ.

ಈ ಒಂದು ಓಕುಳಿ ಮೇಲ್ವರ್ಗದವರಿಗೆ ಮೋಜಿನ ಆಟವಾಗಿರುತ್ತದೆ. ಅಷ್ಟೇ ಅಲ್ಲದೆ ಓಕುಳಿಯ ರಾತ್ರಿ ಮನರಂಜನೆಗಾಗಿ ಕೌಜಲಗಿಯಲ್ಲಿ ಸಾಂಪ್ರದಾಯಿಕವಾಗಿ ಶ್ರೀಕೃಷ್ಣಪಾರಿಜಾತ ನಾಟಕ ಆಡಲೇಬೇಕು. ಹೀಗಾಗಿ ಈ ಓಕುಳಿಗೂ ಹಾಗೂ ಶ್ರೀಕೃಷ್ಣ ಪಾರಿಜಾತಕ್ಕೂ ಒಂದು ಗಾಢ ಸಂಬಂಧ ಏರ್ಪಟ್ಟಿದೆ.

ಉತ್ತರ ಕರ್ನಾಟಕದಲ್ಲಿ ಇತ್ತೀಚಿನ ದಿನಗಳಲ್ಲಿ ಈ ಆಚರಣೆ ಕಂಡುಬರುತ್ತದೆ. ಕೌಜಲಗಿಯಲ್ಲಿ ಸಹ ಪ್ರತಿವರ್ಷ ಓಕುಳಿ ಆಚರಣೆ ಕಂಡುಬರುತ್ತದೆ. ನಿಂಗಮ್ಮನ ಸಂಬಂಧಿಯೊಬ್ಬರು ಈ ರೀತಿ ಹೇಳುತ್ತಾರೆ. "ಕೌಜಲಗಿಯಲ್ಲಿ ಈಗ್ಗೆ ಎರಡು ವರ್ಷಗಳ ಹಿಂದೆ ಓಕುಳಿಯನ್ನು ಉಗ್ಗಿಸಿಕೊಳ್ಳುತ್ತಿದ್ದರು. ಆದರೆ, ಈಗ ಆಚರಣೆಯನ್ನು ತಡೆದಿದ್ದಾರೆ. ಆದರೂ ಸಹ ತೆರೆಯಲ್ಲಿ ಈ ಸಂಪ್ರದಾಯ ಕಂಡುಬರುತ್ತದೆ. ಯಾರೋ ನೀರು ಉಗ್ಗುತ್ತಾರೆ ಹಾಗೂ ಉಗ್ಗಿಸಿಕೊಳ್ಳುತ್ತಾರೆ ಈ ಒಂದು ಸಂಪ್ರದಾಯ ನಶಿಸಿಲ್ಲ"[೧೯] ಎಂದು ಹೇಳುತ್ತಾರೆ. ಮುಖ್ಯವಾಗಿ ಕೌಜಲಗಿಯಲ್ಲಿ ಈ ಒಂದು ಸಂಪ್ರದಾಯ ಓಕುಳಿಗೆ ಆಚರಣೆಯಲ್ಲಿ ಪಾಲ್ಗೊಳ್ಳುತ್ತಿದ್ದವರು ಹೆಚ್ಚಾಗಿ ಡೊಂಬರ ಸಮುದಾಯದ ಸ್ತ್ರೀಯರು ನಿಂಗಮ್ಮನ ತಾಯಿ ಓಕುಳಿ ನೀರನ್ನು ಪ್ರತಿ ವರ್ಷ ಉಗ್ಗಿಸಿಕೊಳ್ಳುತ್ತಿದ್ದಳು. ಓಕುಳಿ ಪದ್ಧತಿಯಲ್ಲಿ ಇತ್ತೀಚಿನ ದಿನಗಳಲ್ಲಿ ಬಣ್ಣದ ನೀರು ಉಗ್ಗುವುದು ನಿಂತು ಸಾಂಪ್ರದಾಯಿಕ ಪೂಜೆ ಮಾತ್ರ ನಡೆಯುತ್ತದೆ. ಆದರೂ ತಲೆ ಕಟ್ಟಿ ಅದರ ಮಧ್ಯೆ ಹೆಣ್ಣುಗಳಿಗೆ ಬಣ್ಣದ ನೀರು ಎರಚುವ ಸಾಂಕೇತಿಕ ಆಚರಣೆ ಇಂದೂ ನಡೆಯುತ್ತಿದೆ.

ನಂತರ ಓಕುಳಿಯ ದಿನ ಶ್ರೀಕೃಷ್ಣ ಪಾರಿಜಾತ ನಾಟಕ ಪ್ರತಿವರ್ಷ ಆಡುತ್ತಾರೆ. ಇದು ಒಂದು ಪರಂಪರೆಯಾಗಿ ಬೆಳೆದು ಬಂದಿದೆ. ನಿಂಗಮ್ಮ ಪ್ರತಿವರ್ಷ ಓಕುಳಿ ಹಬ್ಬದಂದು ಬಂದು ಪಾರಿಜಾತ ಆಟ ಆಡಿ ಹೋಗುತ್ತಿದ್ದಳಂತೆ. ನಿಂಗಮ್ಮನ ಸ್ಮರಣಾರ್ಥಕವಾಗಿ ೧೯೯೮ರಲ್ಲಿ ನಿಂಗಮ್ಮ ಹೆಸರಿನಲ್ಲಿ ರಂಗಮಂದಿರವನ್ನು ಕೌಜಲಗಿಯಲ್ಲಿ ಕಟ್ಟಿಸಲಾಗಿದೆ.

### ೧.೨. ಎಲ್ಲಮ್ಮ ದೇವತೆಯ ಆರಾಧನೆ

ಉತ್ತರ ಕರ್ನಾಟಕದ ಪ್ರಸಿದ್ಧ ದೇವತೆ ಎಲ್ಲಮ್ಮ. ಈ ದೇವಿಯ ಆರಾಧನೆಯಲ್ಲಿ ಮುತ್ತು ಕಟ್ಟಿಸಿ ಕೊಳ್ಳುವುದು ಒಂದು ಸಂಪ್ರದಾಯ, ಹಾಗೂ ದೇವಿಯ ಆರಾಧನೆಯ ಒಂದು ಭಾಗವಾಗಿ ಈ ಸಂಪ್ರದಾಯ ಬೆಳೆದುಕೊಂಡು ಬಂದಿದೆ. ಮುತ್ತು ಕಟ್ಟಿಸಿಕೊಳ್ಳುವುದು ಎಂದರೆ ಸ್ತ್ರೀ ಅಥವಾ ಪುರುಷ, ಎಲ್ಲಮ್ಮ ದೇವತೆಗೆ ತಮ್ಮನ್ನು ತಾವೇ ಅರ್ಪಿಸಿಕೊಳ್ಳುವುದು. ಮುತ್ತು ಕಟ್ಟಿಸಿಕೊಂಡ ಸ್ತ್ರೀ ಜೋಗತಿ ಯಾಗುತ್ತಾಳೆ. ಇವಳನ್ನು ದೇವದಾಸಿ ಎಂದು ಸಹ ಕರೆಯುತ್ತಾರೆ. ಮುತ್ತು ಕಟ್ಟಿಸಿಕೊಂಡ ಗಂಡಸು ಜೋಗಯ್ಯ ಆಗುತ್ತಾನೆ. ಮುತ್ತು ಕಟ್ಟಿಸಿಕೊಂಡ ಸ್ತ್ರೀ ಆದಿನ ರಾತ್ರಿ ಪೂಜಾರಿಯ ಜೊತೆಯಲ್ಲಿ ಅಥವಾ

ಮೇಲ್ಜಾತಿಯ ಪುರುಷನ ಜೊತೆಯಲ್ಲಿ ಇರಬೇಕಾಗುತ್ತದೆ. ನಂತರ ಅವಳು ದೇವದಾಸಿಯಾಗುತ್ತಾಳೆ. ಅವಳು ಯಾರನ್ನೂ ಮದುವೆಯಾಗುವಂತಿಲ್ಲ. ಅವಳಿಗೆ ಇಷ್ಟ ಬಂದವರ ಜೊತೆ ಇರಬಹುದು. ಧಾರ್ಮಿಕತೆಯ ಹೆಸರಲ್ಲಿ ಮಹಿಳೆಯರನ್ನು ವೇಶ್ಯಾ ವೃತ್ತಿಗೆ ಬೀಳಿಸುವ ಪದ್ಧತಿ ಉತ್ತರ ಕರ್ನಾಟಕದಲ್ಲಿ ಈಗಲೂ ಪ್ರಚಲಿತದಲ್ಲಿದೆ.

ಮೇಲ್ವರ್ಗಗಳ ಭೋಗದ ಜೀವನಕ್ಕೆ ಮತ್ತು ಕೆಳವರ್ಗಗಳು ನೈತಿಕವಾಗಿ ನಾಶವಾಗಿ ಸಾಮಾಜಿಕ ಅಧಿಕಾರಗಳಿಂದ ದೂರವಿಡುವ ಕಾರಣಗಳಿಗಾಗಿ ಈ ಬಗೆಯ ಪದ್ಧತಿಗಳನ್ನು ಶ್ರೇಣೀಕೃತ ಸಮಾಜ ಪೋಷಿಸಿಕೊಂಡು ಬಂದಿದೆ. ಈ ಪದ್ಧತಿಗಳಿಂದ ಒಂದು ಅರಾಜಕ ಸಮಾಜವು ರೂಪಗೊಂಡು, ಸಾಮಾಜಿಕ ಅಸಮಾನತೆಗಳು ಇನ್ನೂ ಜ್ವಲಂತವಾಗುತ್ತಲೇ ಮೇಲ್ವರ್ಗಗಳ ಅಧಿಕಾರಗಳಿಗೆ ಯಾವ ಪ್ರತಿರೋಧಗಳು ಹುಟ್ಟದ ಸನ್ನಿವೇಶ ಈ ಹಿನ್ನೆಲೆಯಲ್ಲಿ ನಿರ್ಮಾಣವಾಗುತ್ತದೆ.

ಮುಂದೆ ಆಧುನಿಕಪೂರ್ವ ಕರ್ನಾಟಕದಲ್ಲಿ ರಂಗಭೂಮಿ ಆಗತಾನೇ ರೂಪಗೊಳ್ಳುತ್ತಿದ್ದ ಸಂದರ್ಭದಲ್ಲಿ ನಾಟಕಗಳು ಪ್ರಾರಂಭವಾಗಿದ್ದವು. ಕೆಳವರ್ಗಗಳಿಂದಲೇ, ಈ ನಾಟಕಗಳು ಸೀಮಿತ ಪ್ರೇಕ್ಷಕ ಮತ್ತು ಉದ್ದೇಶಗಳನ್ನು ಗಮನದಲ್ಲಿಟ್ಟುಕೊಂಡ ಕಿರುನಾಟಕಗಳು. ಆದರೆ ಇವು ಯಾವತ್ತೂ ಈವತ್ತಿನ ಅಭಿಜಾತ ನಾಟಕಗಳ ಪ್ರದರ್ಶನಗಳಂತಿರದೆ, ನಿತ್ಯದ ಬವಣೆಗಳನ್ನೇ ನಾಟಕೀಯಗೊಳಿಸುವ ರಂಜನೆಯ ಸನ್ನಿವೇಶಗಳಾಗಿ ಅಭಿನಯಿಸಲ್ಪಡುತ್ತಿದ್ದವು. ತಮ್ಮ ಬದುಕನ್ನೇ ಲೌಕಿಕದ ಕಹಿಯ ಮುಂದೆ ವ್ಯಂಗ್ಯ ಮಾಡಿಕೊಂಡು ಖುಷಿಪಡುವ ಕೆಳಜಾತಿಗಳ ಹಾಸ್ಯಪ್ರಜ್ಞೆಯಿಂದ ಈ ನಾಟಕಗಳು ಸೃಷ್ಟಿಯಾದವು. ಈವತ್ತೂ ಹಕ್ಕಿಪಿಕ್ಕಿ ಎಂಬ ಸಮುದಾಯವು ತನ್ನನ್ನು ತಾನೇ ನಗೆಪಾಟಲಿನ ವಿಷಯವನ್ನಾಗಿಸಿಕೊಂಡು ಸಮಕಾಲೀನ ನೋವು ಅವಮಾನಗಳನ್ನು ಮರೆಯಲೆತ್ನಿಸುತ್ತದೆ. ವರ್ತಮಾನದ ತನ್ನ ಅಸಹಾಯಕತೆಯನ್ನೇ ತಮಾಷೆ ಮಾಡಿಕೊಂಡು ನಕ್ಕು ಈ ಸಮುದಾಯ ಹಗುರವಾಗುತ್ತದೆ. ಹೀಗಾಗಿ ಕೆಳಜಾತಿಗಳ ಆರಂಭದ ಕಿರುನಾಟಕಗಳು ಅವುಗಳ ದಿನನಿತ್ಯದ ಬದುಕನ್ನು ವಿವರಿಸಿಕೊಳ್ಳುವ ಪ್ರಸಂಗಗಳಾಗಿಯೇ ಇದ್ದವು. ಸುಬ್ಬಣ್ಣ ಅದನ್ನು ಹೀಗೆ ಹೇಳುತ್ತಾರೆ. "ಸಮುದಾಯಗಳಿಗೆ ರಂಗಭೂಮಿಯೆನ್ನುವುದು ಅಥವಾ ಕಾವ್ಯ ಸಂಗೀತ ಮುಂತಾದವು ಕೂಡ ಕೇವಲ 'ದೇಖಾವೆ'ಯ ವಸ್ತುಗಳಲ್ಲ, ತಾವು ತಮ್ಮಲ್ಲಿ ತಂದುಕೊಂಡು ಸ್ವತಃ ಆಚರಿಸಿಕೊಳ್ಳಬೇಕಾದ ಆಚರಣೆಗಳು."[೨೦]

ಮುಂದೆ ವಿಕಾಸಗೊಂಡ ರಂಗ ಪರಂಪರೆಯಲ್ಲಿನ ನಟರು ಹೆಚ್ಚಾಗಿ ಸಮಾಜದ ದುಡಿವ ವರ್ಗಗಳಿಂದ ಬಂದವರೇ ಆಗಿದ್ದಾರೆ. ಅದರಲ್ಲೂ ಕನ್ನಡದ ಮೊದಲ ರಂಗನಟಿ ದಿ. ಕೌಜಲಗಿ ನಿಂಗಮ್ಮ ಡೊಂಬರ ಸಮುದಾಯದಿಂದ ಬಂದವಳಾಗಿದ್ದಾಳೆ. ದುಡಿವ ವರ್ಗಗಳಿಗೆ ಸೃಜನಶೀಲ

ಆಯಾಮಗಳು, ಕೇವಲ ಶುದ್ಧ ಅಭಿವ್ಯಕ್ತಿ ಕ್ರಮಗಳು ಮಾತ್ರವಲ್ಲ, ನಿತ್ಯದ ಬದುಕಿನ ಕಷ್ಟಸುಖಗಳನ್ನು ದಾಖಲಿಸುವ ಮಾಧ್ಯಮಗಳಿವೆ. ಅದಕ್ಕಾಗಿಯೇ ದುಡಿವ ವರ್ಗಗಳ ಸೃಜನಶೀಲ ಆಯಾಮಗಳಿಗೆ ಬೇಲಿಗಳಿಲ್ಲ. ನೈತಿಕ ಅನೈತಿಕತೆಗಳ ಗೋಜಲುಗಳಿಲ್ಲ. ತಮ್ಮ ಹೆಣ್ಣುಗಳನ್ನು ರಂಗನಟಿಯನ್ನಾಗಿಸಲು ಈ ವರ್ಗಗಳು ಯಾವತ್ತೂ ಹಿಂದುಮುಂದು ನೋಡಲಿಲ್ಲ. ನಿಂಗಮ್ಮನ ಸಮುದಾಯದ ಚಾರಿತ್ರಿಕ ಹಿನ್ನೆಲೆಯು ಅವಳನ್ನು ಸಹಜವಾಗಿಯೇ ರಂಗನಟಿಯಾಗಲು ಪ್ರೇರೇಪಿಸಿತು. ಇದಕ್ಕೆ ಕಾರಣ ದುಡಿವ ವರ್ಗಗಳ ಸಾಮಾಜಿಕ ಅಭಿವ್ಯಕ್ತಿಗಳಲ್ಲಿನ ವೈವಿಧ್ಯತೆ ಮತ್ತು ವಿಷಾದಮಯ ಜೀವನಪ್ರೀತಿ.

## ೩. ಡೊಂಬರ ಸಮುದಾಯದ ಮಹಿಳೆಯಾಗಿ ನಿಂಗಮ್ಮ

### ೧. ಡೊಂಬರ ಸಮುದಾಯ ಮತ್ತು ನಿಂಗಮ್ಮ

ನಿಂಗಮ್ಮಳ ಚರಿತ್ರೆ ಹುಡುಕುವುದು ಕಷ್ಟ. ಖಚಿತ ಮಾಹಿತಿ ದೊರೆಯುವುದು ಕಷ್ಟ. ಸು. ೧೫೦ ವರ್ಷಗಳ ಹಿಂದೆ ನಿಂಗಮ್ಮ ಬದುಕಿದ್ದಳು. ನಿಂಗಮ್ಮಳ ಚರಿತ್ರೆ ಬಾಯಿಯಿಂದ ಬಾಯಿಗೆ ಹರಿದು ಬಂದಿದೆ. ನಿಂಗಮ್ಮನನ್ನು ನೋಡಿ ಅವಳ ಜೊತೆ ಒಡನಾಡಿದ ಜನ ಕೆಲವೇ ಕೆಲವರು ಇಂದು ಅವಳನ್ನು ನೆನೆಯುತ್ತಾರೆ.

ನಿಂಗಮ್ಮ ತನ್ನ ಸಮುದಾಯವನ್ನು ಕಟುವಾಗಿ ಟೀಕಿಸುತ್ತಿದ್ದಳಂತೆ, ತನ್ನ ತಾಯಿಗೆ ಆದ ಸಾಮಾಜಿಕ ಅವಮಾನಗಳನ್ನು ನೆನೆದು ನನ್ನ ಜಾತಿಯನ್ನು ಹಲವು ರೀತಿಯಲ್ಲಿ ವಿಮರ್ಶೆಗೆ ಒಳಪಡಿಸುತ್ತಿದ್ದಳಂತೆ. ಅಲ್ಲದೆ ಆದಷ್ಟು ತನ್ನ ಜಾತಿಯವರಿಂದ ದೂರ ಇರಲು ಇಷ್ಟ ಪಡುತ್ತಿದ್ದಳಂತೆ.

ನಿಂಗಮ್ಮ ಸು. ೧೨ನೇ ವಯಸ್ಸಿನಿಂದ ರಂಗಸೇವೆ ಮಾಡುತ್ತಾ ಬಂದವಳು. ಅವಳಿಗೆ ತನ್ನ ಸಮುದಾಯ ಜೊತೆ ನಿರಂತರ ಸಂಪರ್ಕವಿರಲಿಲ್ಲ. ನಿಂಗಮ್ಮನ ಸಂಬಂಧಿಯೊಬ್ಬರು ಹೇಳುತ್ತಾರೆ. ನಿಂಗಮ್ಮ ಓಕುಳಿಗೆಂದು ಕೌಜಲಗಿಗೆ ಬರುತ್ತಿದ್ದಾಗ ಪಾರಿಜಾತ ಆಟ ಮುಗಿಸಿಕೊಂಡು ತನ್ನ ಸಂಬಂಧಿಕರನ್ನು ಮತ್ತು ಸಮುದಾಯದವರನ್ನು ಮಾತನಾಡಿಸಿಕೊಂಡು ಹೋಗುತ್ತಿದ್ದಳಂತೆ. ಆದರೆ ಅವಳಿಗೆ ಸಮುದಾಯದ ಕುರಿತು ಕೆಟ್ಟ ಅಭಿಪ್ರಾಯಗಳಿರಲಿಲ್ಲ. ತನ್ನ ಸಮುದಾಯ ಬದುಕುತ್ತಿದ್ದ ರೀತಿಯ ಕುರಿತು ಅವಳಿಗೆ ಸಿಟ್ಟಿತ್ತು.

### ೨. ಸಮುದಾಯದ ದೃಷ್ಟಿಯಲ್ಲಿ ಕೌಜಲಗಿ ನಿಂಗಮ್ಮ

ಕೌಜಲಗಿ ನಿಂಗಮ್ಮಳ ಬಗ್ಗೆ ಸಮುದಾಯದವರಿಗೆ ಅಪಾರವಾದ ಗೌರವ, ಪೂಜ್ಯ ಭಾವನೆ ಇದೆ. ಡೊಂಬರ ಸಮುದಾಯದಲ್ಲಿ ಹುಟ್ಟಿದ ಶುದ್ಧ ಚೈತನ್ಯವೆಂದೇ ಆಕೆಯನ್ನು ಸಮುದಾಯದವರು ಗೌರವಿಸುತ್ತಾರೆ.

ಡೊಂಬರ ಸಮುದಾಯದ ಸಂಘದ ಅಧ್ಯಕ್ಷರು ಹೀಗೆ ಹೇಳುತ್ತಾರೆ. "ನಿಂಗಮ್ಮ ಸಮಾಜದಲ್ಲಿ ಎಲೆಮರೆಯ ಕಾಯಿ ಆಗಿದ್ದಾಳೆ. ಅವಳನ್ನು ಸಮಾಜಕ್ಕೆ ಪರಿಚಯಿಸುವುದು ಅಗತ್ಯವಾಗಿದೆ. ನಿಂಗಮ್ಮ ಅಪಾರ ಸಾಧನೆ ಮಾಡಿದ್ದಾಳೆ. ಅವಳು ಯಾರೂ ಮಾಡದ ಸಾಧನೆ ಮಾಡಿ ಅಮರಳಾಗಿದ್ದಾಳೆ. ಅವಳ ಹುಟ್ಟೂರಿನಲ್ಲಿ ಅವಳ ಹೆಸರಿನಲ್ಲಿ 'ರಂಗಮಂದಿರ' ನಿರ್ಮಾಣವಾಗಿದೆ. ಹಾಗೂ ನಿಂಗಮ್ಮಳ ಸ್ಮರಣೆಗಾಗಿ ಕಟ್ಟಿಸಲಾಗಿದೆ. ನಮ್ಮ ಸಮುದಾಯದಲ್ಲಿ ಪ್ರತಿಭಾವಂತರಿಗೆ ನಿಂಗಮ್ಮಳ ಹೆಸರಿನಲ್ಲಿ ಪುರಸ್ಕಾರ ನೀಡಿ ಮತ್ತು ಪ್ರೋತ್ಸಾಹ ನೀಡುವ ಯೋಜನೆಗಳು ಇವೆ. ನಿಂಗಮ್ಮ ಕರ್ನಾಟಕ ರಂಗಭೂಮಿಯ ಮೊಟ್ಟಮೊದಲ ನಟಿ. ನಿಂಗಮ್ಮ ಡೊಂಬರ ಸಮುದಾಯದ ಮಹಿಳೆಯಾಗಿರುವುದೇ ಹೆಮ್ಮೆ ಪಡುವ ವಿಷಯವಾಗಿದೆ ಎಂದು ಹೇಳಿದರು."[೨೧]

ನಿಂಗಮ್ಮ ಒಂದು ಪುಟ್ಟ ಪರಿಶಿಷ್ಟ ಜಾತಿಯಲ್ಲಿ ಹುಟ್ಟಿದ ಕಾರಣಕ್ಕೋ ಏನೋ ಇಂದು ನಿಂಗಮ್ಮನ ಹೆಸರು ವ್ಯಾಪಕವಾಗಿ ಪ್ರಚಲಿತದಲ್ಲಿಲ್ಲ. ವಸಾಹತು ಕಾಲಘಟ್ಟದಲ್ಲಿ ಒಬ್ಬ ಕೆಳಜಾತಿಯ ಮಹಿಳೆ ರಂಗನಟಿಯಾಗಿ, ನಾಟಕ ಕಂಪನಿ ಕಟ್ಟಿ, ಪಾರಿಜಾತಕ್ಕೆ ಹಲವು ಜನಪ್ರಿಯ ಆಯಾಮಗಳನ್ನು ಕಲ್ಪಿಸಿ ಜೀವಂತ ದಂತಕತೆಯಾದ ನಿಂಗಮ್ಮನನ್ನು ಇಂದು ರಂಗಭೂಮಿಯ ಯಾವ ಜನರೂ ನೆನಪಿಸಿ ಕೊಳ್ಳುತ್ತಿಲ್ಲ. ಆದರೆ ಡೊಂಬರ ಸಮುದಾಯದ ಜನ ಆಕೆಯನ್ನು ಅತ್ಯಂತ ಪ್ರೀತಿಯಿಂದ ನೆನಪಿಸಿಕೊಳ್ಳುತ್ತಾರೆ. ಆಕೆ ನಮ್ಮ ಸಮುದಾಯದ ದೊಡ್ಡ ಸಂಪತ್ತೆಂದೇ ಅವಳ ಸಮುದಾಯದ ಜನ ಭಾವಿಸಿದ್ದಾರೆ. ನಾನು ಕ್ಷೇತ್ರಕಾರ್ಯ ಮಾಡಿದ ಎಲ್ಲೆಡೆಯೂ ನಿಂಗಮ್ಮ ಹಲವು ರೀತಿಯಲ್ಲಿ ಜನ ಪ್ರಶಂಸಿದರು.

ಪಾರಿಜಾತದ ಕಲಾತಪಸ್ವಿಯಾದ ಕೌಜಲಗಿ ನಿಂಗಮ್ಮ ಇಲ್ಲವಾಗಿ ಸು. ೧೫೦ ವರ್ಷಗಳ ಆಗಿವೆ. ನಿಂಗಮ್ಮಳನ್ನು ಈ ಸಮಾಜ ಮರೆತುಬಿಟ್ಟಿದೆ. ಕೆಲವು ವಿದ್ವಾಂಸರು ಡಾ. ಬಸವರಾಜ ಮಲಶೆಟ್ಟಿ, ಬಾಳೆಶ ಲಕ್ಷೆಟ್ಟಿ, ಶ್ರೀರಾಮ ಇಟ್ಟಣ್ಣನವರು, ಡಾ. ನಿಂಗಣ್ಣ ಸಣ್ಣಕ್ಕ, ಡಾ ಅಶೋಕ ನರೋಡೆ ಹಾಗೂ ಪ್ರೊ. ದೇವೇಂದ್ರ ಬಿಸ್ವಾಗರ್, ಪ್ರಕಾಶ್ ಕೋಟನತೋಟ್, ಕೌಜಲಗಿ ನಿಂಗಮ್ಮಳ ಕುರಿತು ಪುಸ್ತಕಗಳನ್ನ ಲೇಖನಗಳನ್ನು ಪ್ರಕಟಿಸಿದ್ದಾರೆ.

ಉತ್ತರ ಕರ್ನಾಟಕದ ಮನೆಮಾತಾಗಿ ನಿಂಗಮ್ಮ ಉಳಿದಿದ್ದಾಳೆ. ನಿಂಗಮ್ಮ ತನಗಾಗಿ ಏನನ್ನೂ ಮಾಡಿಕೊಂಡವಳಲ್ಲ. ಕಲೆಗೆ ಮತ್ತು ಕಲಾವಿದರಿಗಾಗಿ ತನ್ನ ಜೀವನವನ್ನೆ ಮುಡುಪಾಗಿಟ್ಟವಳು. ಮಹಾಲಿಂಗಾಪುರದ ಮಗಳಾಗಿ ಪಾರಿಜಾತ ಕಲಾವಿದರಿಗೆ ನಿಂಗಮ್ಮ ತಾಯಿ ಎನ್ನಿಸಿಕೊಂಡಿದ್ದಾಳೆ.

ಕೌಜಲಗಿ ನಿಂಗಮ್ಮ ಬ್ರಹ್ಮಚಾರಿಯಾಗಿ ಆಧ್ಯಾತ್ಮಿಕ ಜ್ಞಾನ ಹೊಂದಿದವಳು. ಇವಳು ಮಾನವೀಯ ಕಳಕಳಿಯುಳ್ಳವಳು. ಸಾಂಸ್ಕೃತಿಕ ಲೋಕದಿಂದ ಅವಳು ಸಮಾಜಕ್ಕೆ ನೀಡಿದ ಕೊಡುಗೆ ಅಪಾರವಾದುದು.

ನಿಂಗಮ್ಮ ಪಾರಿಜಾತದ ಉಳಿಯುವುದಕ್ಕಾಗಿ ಅನಾಥ ಹೆಣ್ಣು ಸಗರೆವ್ವನನ್ನು ಸಾಕಿ ಲಕ್ಷ್ಮೀಬಾಯಿಯನ್ನು ದತ್ತು ತೆಗೆದುಕೊಂಡು ತನ್ನ ಕಲಾವಂಶವನ್ನು ಬೆಳೆಸಿದಳು. ಇಂತಹ 'ಕಲಾಜ್ಯೋತಿ', 'ಕಲಾಸಿರಿ', 'ಕಲಾತಪಸ್ವಿ' ನಿಂಗಮ್ಮನ ರಂಗಭೂಮಿಯ ಚರಿತ್ರೆ ಸರಿಯಾಗಿ ದಾಖಲಾಗಬೇಕಿದೆ. ಸರಕಾರ ಸಮಾಜ ಹಾಗೂ ಅಕಾಡೆಮಿಗಳು ಇತ್ತ ಗಮನ ಹರಿಸಬೇಕಿದೆ.

ನಿಂಗಮ್ಮ ರಂಗಭೂಮಿಗೆ ನೀಡಿರುವ ಕೊಡುಗೆ ಅಪಾರವಾಗಿದೆ. ಕಲೆಯೇ ಉಸಿರೆಂದು ಬಾಳಿಹೋದ ಮಹಾನ್ ಚೇತನ ಇವಳು. ಕೌಜಲಗಿ ನಿಂಗಮ್ಮಳ ಸ್ಮರಣೆಯಲ್ಲಿ ಅವಳ ಹುಟ್ಟೂರು ಕೌಜಲಗಿಯಲ್ಲಿ ಹಾಗೂ ಕರ್ಮಭೂಮಿ ಮಹಾಲಿಂಗಪುರದಲ್ಲಿ ಅವಳ ನೆನಪಿನ ಸ್ಮಾರಕಗಳು ರೂಪಗೊಳ್ಳಬೇಕಾಗಿದೆ. ಗುಬ್ಬಿವೀರಣ್ಣನವರ ಹೆಸರಿನಲ್ಲಿ ನೀಡುವ ಪ್ರಶಸ್ತಿಗಳಲ್ಲಿರುವ ಹಾಗೆ, ರಂಗಭೂಮಿ ಕಲಾವಿದರಿಗಾಗಿ ಜಾನಪದ ಬಯಲಾಟದ ರಂಗಭೂಮಿಯ ಪ್ರಪ್ರಥಮ ರಂಗನಟಿಯಾದ ಕೌಜಲಗಿ ನಿಂಗಮ್ಮಳ ಹೆಸರಿನಲ್ಲಿ ಪ್ರಶಸ್ತಿ ನೀಡುವುದು ಅಗತ್ಯವಾಗಿದೆ. ಘನ ಸರಕಾರ ಈ ಕಾರ್ಯವನ್ನು ಕೈಗೊಳ್ಳಬೇಕು. ಈಗ ನಿಂಗಮ್ಮ ಹೆಸರಿನಲ್ಲಿ ಪ್ರಶಸ್ತಿ ನೀಡುವುದರಿಂದ ನಿಂಗಮ್ಮಳನ್ನು ಶಾಶ್ವತವಾಗಿ ನೆನಪಿನಲ್ಲಿ ಉಳಿಸಿಕೊಂಡು ಬಂದಂತೆ ಆಗುತ್ತದೆ.

■■

### ಟಿಪ್ಪಣಿಗಳು

೧. ಕಲಾಜ್ಯೋತಿ ದಿ ಕೌಜಲಗಿ ನಿಂಗಮ್ಮ, ಬಾಳೇಸ ಲಕ್ಷಟ್ಟಿ, ಪು.೧
೨. ಕೌಜಲಗಿ ನಿಂಗಮ್ಮ, ಶ್ರೀರಾಮ ಇಟ್ಟಣ್ಣನವರು, ಪು.೫
೩. ಕನ್ನಡ ಜನಪದ ಕಲಾರಂಗ ಭೂಮಿಯ ಮಹಾನ್ ಕಲಾತಪಸ್ವಿ
ದಿ. ಕೌಜಲಗಿ ನಿಂಗಮ್ಮನವರು, ಪ್ರಕಾಶ್ ಕೋಟಿನ ತೋಟ
೪. ಕೌಜಲಗಿ ನಿಂಗಮ್ಮ, ಶ್ರೀರಾಮ ಇಟ್ಟಣ್ಣನವರು, ಪು.೬
೫. ಕಲಾಜ್ಯೋತಿ ದಿ ಕೌಜಲಗಿ ನಿಂಗಮ್ಮ, ಬಾಳೇಶ ಲಕ್ಷಟ್ಟಿ, ಪು.೨
೬. ಕಲಾತಪಸ್ವಿ ಕೌಜಲಗಿ ನಿಂಗಮ್ಮ, ಡಾ. ಅಶೋಕ ನರೋಡೆ, ಪು.೧೧
೭. ಮಾಹಿತಿದಾರ ಪರಪ್ಪ ಗುರುಬಸಪ್ಪ ಅಂಗಡಿ
೮. ಕೌಜಲಗಿ ನಿಂಗಮ್ಮ, ಶ್ರೀರಾಮ ಇಟ್ಟಣ್ಣನವರು, ಪು.೬
೯. ಮಾಹಿತಿದಾರರ ಪತ್ರಿಕೋದ್ಯಮಿ ಪ್ರಕಾಶ್ ಕೋಟನ ತೋಟ
೧೦. ಕೌಜಲಗಿ ನಿಂಗಮ್ಮ, ಶ್ರೀರಾಮ ಇಟ್ಟಣ್ಣನವರು, ಪು.೪೦
೧೧. ಕಮಲವ್ವ ಕೌಜಲಗಿ
೧೨. ಮಾಹಿತಿದಾರ ಮಹಾಲಿಂಗಯ್ಯ ಬಸವ ಪರಯ್ಯ, ಇಟ್ಟನ ಮಠ

೧೩. ನಿಂಗಮ್ಮನ ವಂಶಾವಳಿ ಮಾಹಿತಿದಾರ ಕಮಲವ್ವ ಕೌಜಲಗಿ

೧೪. ಮಾಹಿತಿದಾರ ಹೆಚ್.ಎಲ್. ಕಲಾಲ್

೧೫. ಮಾಹಿತಿದಾರ ಯಮನಪ್ಪ ಮತ್ತು ಗೊಪಳವು ಕೌಜಲಗಿ

೧೬. ಕಲಾತಪಸ್ವಿ ಕೌಜಲಗಿ ನಿಂಗಮ್ಮ, ಡಾ. ಅಶೋಕ ನರೋಡೆ, ಪು.೧೧

೧೭. ರಂಗಭೂಮಿ ಮತ್ತು ಸಮುದಾಯ, ಕೆ.ವಿ. ಸುಬ್ಬಣ್ಣ, ಪು.೨೩

೧೮. ದೇವದಾಸಿ ಸಂಪ್ರದಾಯ, ಡಾ. ಜೋಗನ್ ಶಂಕರ್, ಪು.೨೩

೧೯. ಮಾಹಿತಿದಾರ ಸುಭಾಷ್ ಕೌಜಲಗಿ

೨೦. ರಂಗಭೂಮಿ ಮತ್ತು ಸಮುದಾಯ ಕೆ.ವಿ. ಸುಬ್ಬಣ್ಣ

೨೧. ಮಾಹಿತಿದಾರ ಬಿ.ಎಂ. ಕೌಜಲಗಿ

ಅಧ್ಯಾಯ ೫

# ಕೌಜಲಗಿ ನಿಂಗಮ್ಮ ಮತ್ತು ಪಾರಿಜಾತ

ಉತ್ತರ ಕರ್ನಾಟಕದ ಜನಪ್ರಿಯ ಬಯಲಾಟಗಳಲ್ಲಿ ಒಂದಾದ "ಶ್ರೀಕೃಷ್ಣ ಪಾರಿಜಾತ" ಸಣ್ಣಾಟದಿಂದ ಹುಟ್ಟಿಕೊಂಡು ನಂತರ ವಿಶೇಷ ರೀತಿಯಲ್ಲಿ ಸಣ್ಣಾಟದಿಂದ ಪ್ರತ್ಯೇಕಗೊಂಡಿತ್ತು ಎಂದು ಹಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. 'ಶ್ರೀಕೃಷ್ಣ ಪಾರಿಜಾತ ಸಣ್ಣಾಟಗಳ ರಾಜ' ನೆಂದು ಕರೆಸಿಕೊಂಡಿದೆ."[೧]

ಶ್ರೀಕೃಷ್ಣ ಪಾರಿಜಾತ : ಶ್ರೀಕೃಷ್ಣ ರುಕ್ಮಿಣಿ ಸತ್ಯಭಾಮೆಯರು ಸರಸ ವಿರಸ ಒಳಗೊಂಡ ಕೃಷ್ಣಲೀಲೆಯಾಗಿದೆ. ಶ್ರೀಕೃಷ್ಣಪಾರಿಜಾತ ನಾಟಕದಲ್ಲಿ ಹಾಡುಗಳು ಜೀವಕಳೆ ತುಂಬುತ್ತವೆ. ವಾಸ್ತವ ಸಂಗತಿಯೆಂದರೆ ಇತ್ತೀಚಿನ ದಿನಗಳಲ್ಲಿ ಏಕಪತ್ನಿ ಕಾಯಿದೆ ಜಾರಿಯಲ್ಲಿದೆ. ಪಾರಿಜಾತದಲ್ಲಿ ಬರುವ ರುಕ್ಮಿಣಿ ಸತ್ಯಭಾಮಿಯರ ಸವತಿ ಮತ್ಸರಕ್ಕೆ ಮನ್ನಣೆ ನೀಡಿರಬಹುದು. ಕೇವಲ ಒಂದು ಹೂವಿಗೋಸ್ಕರ ಸಾಮಾನ್ಯ ಜನರಂತೆ ಜಗಳವಾಡುವ ಸನ್ನಿವೇಶ ಪ್ರೇಕ್ಷಕರಿಗೆ ಮೆಚ್ಚುಗೆ ತರುವಂತ ವಿಷಯವಾಗಿದೆ. ಈ ಬಯಲಾಟದಲ್ಲಿ ಸಂಗೀತ ಮತ್ತು ಹಾಡುಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಲಾಗಿದೆ.

ಶ್ರೀಕೃಷ್ಣಪಾರಿಜಾತವನ್ನು ಮೊಟ್ಟಮೊದಲಿಗೆ ರಚಿಸಿದವರು ಅಪರಾಳ ತಮ್ಮಣ್ಣ. ಈ ಕೃತಿಯಲ್ಲಿ ಭಾಗವತ - ಹರಿವಂಶ ಪುರಾಣ ಮುಖ್ಯ ಆಕರಗಳಾಗಿವೆ. ಇದೊಂದು ವೈದಿಕ ಪಠ್ಯವಾಗಿದೆ. ಅಪರಾಳ ತಿಮ್ಮಣ್ಣನ ಶ್ರೀಕೃಷ್ಣ ಪಾರಿಜಾತ ಕೃತಿಯ ಪ್ರೇರಣೆಯಿಂದ ಕುಲಗೋಡ ತಮ್ಮಣ್ಣನ ಶ್ರೀಕೃಷ್ಣ ಪಾರಿಜಾತದಲ್ಲಿ ಬದಲಾವಣೆಯನ್ನು ತಂದನು. ಈತ ತನ್ನದೇ ಆದ ರೀತಿಯಲ್ಲಿ ರಚನೆ ಮಾಡಿದನು. ಕೃಷ್ಣ ಗೋಲ್ಲತಿಯರ ಪ್ರವೇಶ. ಭಾಗವತ - ಮರಿಭಾಗವತ ಸಂಭಾಷಣೆ ಹಾಗೂ ಭಾಮ - ಕೊರವಂಜಿಯರ ಸನ್ನಿವೇಶ ಹಾಗೂ ರುಕ್ಮಿಣಿ - ಸತ್ಯಭಾಮಯರ ಸವತಿಮತ್ಸರ ಈ ಎಲ್ಲ ಸನ್ನಿವೇಶಗಳನ್ನು ಒಳಗೊಂಡ ರಾಸಲೀಲೆಯಾಗಿದೆ. ಕುಲಗೋಡ ತಮ್ಮಣ್ಣನ ಪಾರಿಜಾತದಲ್ಲಿ ಸಾಮಾನ್ಯ ಜನರ ಜೀವನದಲ್ಲಿ ವಾಸ್ತವ ಅಂಶಗಳ ಒಳಗೊಂಡಿರುತ್ತದೆ. ಕುಲಗೋಡ ತಮ್ಮಣ್ಣನ ಕೈಯಲ್ಲಿ

ನಿಂಗಮ್ಮ, ಹುಕ್ಕೇರಿ ಸಿದ್ದರಾಮಪ್ಪ. ಕನ್ನಡದ ರಂಗಭೂಮಿಗೆ ಸ್ತ್ರೀಯರನ್ನು ಪ್ರವೇಶಿಸುವಂತೆ ಮಾಡಿದ ಕೀರ್ತಿ ಕುಲಗೋಡ ತಿಮ್ಮಣ್ಣನಿಗೆ ಸೇರುತ್ತದೆ.

ಕುಲಗೋಡ ತಮ್ಮಣ್ಣ ತೀರಿಕೊಂಡ ಮೇಲೆ ಪಾರಿಜಾತವನ್ನು ಮುಂದುವರಿಸಿಕೊಂಡು ಹೋದವಳು ಕೌಜಲಗಿ ನಿಂಗಮ್ಮ. ಈಕೆ ಸ್ವಂತ ಮೇಳ ಕಟ್ಟಿಕೊಂಡು ಶ್ರೀಕೃಷ್ಣ ಪಾರಿಜಾತ ಕಂಪನಿ ಸ್ಥಾಪನೆ ಮಾಡಿದಳು. "ಶ್ರೀಕೃಷ್ಣ ಪಾರಿಜಾತದ ಚರಿತ್ರೆಯಲ್ಲಿ ಅಪರಾಳ ತಮ್ಮಣ್ಣನ ರಚನೆ, ಮೊದಲ ಹಂತವಾದರೆ. ಕುಲಗೋಡು ತಮ್ಮಣ್ಣನದು ಎರಡನೆ ಹಂತ. ಕುಲಗೋಡು ತಮ್ಮಣ್ಣನ ಮೇಳ ಸೇರಿದ ಕೌಜಲಗಿ ನಿಂಗಮ್ಮನಿಂದ ಮತ್ತಷ್ಟು ಪ್ರಸಿದ್ಧಿ ಪಡೆಯಿತು. ನಿಂಗಮ್ಮನ ಹಾಡು ಕೇಳಿ, ಅಭಿನಯ ನೋಡಲು ದೂರದ ಊರುಗಳಿಂದ ರಸಿಕರು ಎತ್ತಿನಬಂಡಿಗಳಲ್ಲಿ ಬರುತ್ತಿದ್ದರು. ಕೌಜಲಗಿ ನಿಂಗಮ್ಮ ಕೇಳುಗರ ಮೈಮರೆಯುವಂತೆ ಏರುಧ್ವನಿಯಲ್ಲಿ ಹಾಡುತ್ತಿದ್ದಳು. ಕುಲಗೋಡ ತಮ್ಮಣ್ಣನ ಮೇಳದ ಮತ್ತೊಬ್ಬ ಪ್ರಸಿದ್ಧ ಕಲಾವಿದ ಬಡಕುಂದಿ ಬಸಪ್ಪ. ಇವರೆಲ್ಲರ ಅಭಿನಯದಿಂದಾಗಿ ಪಾರಿಜಾತವೆಂದರೆ ತಮ್ಮಣ್ಣನದೇ ಪಾರಿಜಾತ ಎಂದು ಹೇಳುವಂತಾಯಿತು."[೨]

ಕೌಜಲಗಿ ನಿಂಗಮ್ಮ ಕಲೆಗಾಗಿ ದುಡಿದವಳು. ತನ್ನ ಬದುಕಿನಾದುದ್ದಕ್ಕೂ, ಪಾರಿಜಾತ ರಂಗಭೂಮಿ ಕಲಾರಾಧನೆಯನ್ನು ಮಾಡಿದಳು. ಕಲಾವಿದರನ್ನು ಸ್ವತಃ ನಿರ್ಮಾಣ ಮಾಡಿದಳು. ಕಲೆ ಮತ್ತು ಕಲಾವಿದರನ್ನು ಪೋಷಣೆಮಾಡಿ ಬೆಳೆಸಿದಳು. ಪಾರಿಜಾತವನ್ನು ಉನ್ನತ ಶಿಖರಕ್ಕೆ ಏರಿಸಿದ ಕೀರ್ತಿ, ಇವರಿಗೆ ಸೇರುತ್ತದೆ. ಇಡೀ ಉತ್ತರ ಕರ್ನಾಟಕದಲ್ಲಿ ನಿಂಗಮ್ಮ ಮನೆಮಾತಾಗಿದ್ದಾಳೆ. ಇತ್ತೀಚಿನ ದಿನಗಳಲ್ಲಿ ಸಹ ಉತ್ತರ ಕರ್ನಾಟಕದ ಜನರ ಮನಸ್ಸಿನಲ್ಲಿ ಜೀವಂತವಾಗಿದ್ದಾಳೆ. ಇವಳು ಕಲೆಯಲ್ಲಿ ಕಲೆಯಾಗಿ ಬೆರತು ಹೋದವಳು. ನಿಂಗಮ್ಮ ತನ್ನ ಲಜ್ಜೆಇಳಿವಯಸ್ಸಿನ ಸಹ ಅಭಿನಯಿಸಿದ್ದಾಳೆ. ಕೇವಲ ಕರ್ನಾಟಕದಲ್ಲಿ ಅಷ್ಟೇ ಅಲ್ಲ, ಮಹಾರಾಷ್ಟ್ರದಲ್ಲಿಯೂ ಕೂಡ ಈಕೆ ಅಭಿನಯಿಸಿದ್ದಾಳೆ.

### ಅ. ಜನಪ್ರಿಯ ಪಠ್ಯವಾಗಿ ಪಾರಿಜಾತ

ಉತ್ತರ ಕರ್ನಾಟಕದಲ್ಲಿ ಶ್ರೀಕೃಷ್ಣ ಪಾರಿಜಾತ ನಾಟಕ ತುಂಬ ಜನಪ್ರಿಯ ನಾಟಕವಾಗಿದೆ. ಈ ನಾಟಕ ಜನಪ್ರಿಯವಾಗಲು ಮುಖ್ಯವಾಗಿ ಈ ಕಾರಣಗಳನ್ನು ಗುರುತಿಸಬಹುದು.

೧. ಶ್ರೀಕೃಷ್ಣ ಪಾರಿಜಾತ ಕಥೆ ದೈವಸಂಭೂತನಾದ ಶ್ರೀಕೃಷ್ಣನ ಲೀಲೆಯಾಗಿದೆ. ಇದು ಒಂದು ಭಕ್ತಪೂರ್ವಕ ಕಥನವಾಗಿದೆ.

೨. ಶ್ರೀಕೃಷ್ಣ ಪಾರಿಜಾತ ದೈವಸಂಭೂತನಾದ ಶ್ರೀಕೃಷ್ಣ ಜನರ ನಾಯಕನಾಗಿದ್ದು, ದೈವರಾಟ ಮತ್ತು ಮಾನವರಾಟಗಳ ನಡುವೆ ಭಿನ್ನವಾಗಿರುವುದಿಲ್ಲ ಎನ್ನುವುದಕ್ಕೆ, ಈ ನಾಟಕದಲ್ಲಿ ಬರುವ ಸನ್ನಿವೇಶಗಳು

ಜನಸಾಮಾನ್ಯರ ಬದುಕಿನಲ್ಲಿ ಬರುವ ಸಂಗತಿಗಳೇ ಆಗಿರುತ್ತವೆ.

"ಶ್ರೀಕೃಷ್ಣ ಪಾರಿಜಾತ ಪರಂಪರೆ : ಅಪರಾಳ ತಮ್ಮಣ್ಣನಿಂದ ೧೮೫೦ರಲ್ಲಿ ಪ್ರಾರಂಭಿಸಿದರು. ನಂತರ ಅಪರಾಳ ತಮ್ಮಣ್ಣನ ಕೃತಿಯ ಪ್ರೇರಣೆಯಿಂದ ಕುಲಗೋಡು ತಮ್ಮಣ್ಣ (೧೮೮೦-೮೫) ಶ್ರೀಕೃಷ್ಣ ಪಾರಿಜಾತಕ್ಕೆ ಹೊಸ ಆಯಾಮವನ್ನೇ ನಡೀ ಪ್ರಥಮಬಾರಿಗೆ ರಂಗಕ್ಕೆ ಅಳವಡಿಸಿದನು. ಅನಂತಾದ್ರೀಶನೆಂಬ ಅಂಕಿತವುಳ್ಳ ಗೋಕಾವಿಯ ಅನಂತಾಚಾರ್ಯನ, ವೆಂಕಟೇಶ ಮಹಾತ್ಮನೆಂಬ ಅಂಕಿತವುಳ್ಳ, ವೆಂಕಟೇಶ ಪಾರಿಜಾತ (೧೮೮೬) ಮತ್ತು ಶಿವಪಾರಿಜಾತಗಳು ಗೀತ ನಾಟಕಗಳಾಗಿವೆ. ಭೀರಾವ್ ರಾಘುವೇಂದ್ರರಾವ್ ಗುಮಾಸ್ತ. (೧೮೩೫-೧೯೧೫)ಯವರ ಶ್ರೀಕೃಷ್ಣಪಾರಿಜಾತ ಮತ್ತು ಶ್ರೀರಾಮ ಪಾರಿಜಾತ ನಾಟಕಗಳು, ಶೇಷಾಚಾರ್ಯರ (ಸು. ೧೮೧೦), ಶ್ರೀನಿವಾಸ ಕಲ್ಯಾಣ, ಸಿ.ಆರ್. ಚೆಲಮ್ಮನ (ಸಂ. ೧೮೭೫) ಪಾರಿಜಾತ ಪಡರಣ ಯಕ್ಷಗಾನ ವೆಂಕಟಲಕ್ಷ್ಮಮ್ಮನ (ಸು. ೧೮೭೫) ಶ್ರೀಕೃಷ್ಣಪಾರಿಜಾತ ಯಕ್ಷಗಾನ ಮುದ್ದುಕವಿ (೧೮೮೦) ಪಾರಿಜಾತ ಕೆ. ರಾಮಸ್ವಾಮಿ ಅಂಯ್ಯಗಾರ್ (ಸು. ೧೮೮೦) ಸಂಗೀತ ಕಲ್ಯಾಣ ಪಾರಿಜಾತ ಮತ್ತು ಇದೇ ಕಾಲದ ಚಿ. ನರಹರಿಶಾಸ್ತ್ರಿಗಳ ಪಾರಿಜಾತ ಮತ್ತು ಶ್ರೀಕೃಷ್ಣ ಪಾರಿಜಾತ ಪರಿಣಿಯ ನಾಟಕಗಳು ಶಿವಪ್ಪಶಾಸ್ತ್ರೀಯ ಕೃಷ್ಣಪಾರಿಜಾತ ಪರಿಣಯ ನಾಟಕಗಳು ಶಿವ ಶಾಸ್ತ್ರೀಯ ಶ್ರೀಕೃಷ್ಣ ಪಾರಿಜಾತ ಲಕ್ಷ್ಮೀ ನರಸಿಂಹನ ಪಾರಿಜಾತಪಹರಣ ನಾಟಕಗಳು ಎಷ್ಟು ಪಾರಿಜಾತ ಹುಟ್ಟಿಕೊಂಡವು."[೩] ಜನರ ಮಟ್ಟಿಗೆಯನ್ನು ಪಡೆದುಕೊಂಡಿದ್ದು ಕುಲಗೋಡ ತಮ್ಮಣ್ಣನ ಶ್ರೀಕೃಷ್ಣ ಪಾರಿಜಾತ ಒಂದೇಯಾಗಿವೆ. ಇತ್ತೀಚಿನ ದಿನಗಳಲ್ಲಿ ಸಹ ಉತ್ತರಕರ್ನಾಟಕದಲ್ಲಿ ಟಿ.ವಿ. ಚಲನಚಿತ್ರಗಳು ಇದ್ದರೂ, ಸಹ ಶ್ರೀಕೃಷ್ಣ ಪಾರಿಜಾತ ಜನರಿಗೆ ಅಚ್ಚುಮೆಚ್ಚಿನ ನಾಟಕವಾಗಿ ಉಳಿದುಕೊಂಡಿದೆ.

ಶ್ರೀಕೃಷ್ಣ ಪಾರಿಜಾತ ಜನರ ಮೆಚ್ಚಿಗೆ ಪಡೆಯವುದಕ್ಕೆ ಮುಖ್ಯಕಾರಣ ಪಾರಿಜಾತದ ಕಥೆ. ಸಾಮಾನ್ಯ ಜನರ ಬದುಕನ ಜೊತೆ ನಿಕಟವಾದ ಸಂಬಂಧ ಹೊಂದಿದ ಈ ಕಥೆ, ವಾಸ್ತಾಂಶಗಳ ಆಧಾರದ ಮೇಲೆ ನಿಂತಿದೆ. ಬೆಳಗಾದರೆ ಹಾಲು-ಮೊಸರು ಮಾರಾಟ ಮಾಡುವರು ಮತ್ತು ಕೊಳ್ಳುವವರ ಜಗಳಗಳು ಹುಡುಗಿಯರನ್ನು ಚುಡಾಯಿಸುವ ಗೋಪಾಲರು, ಎಲ್ಲಾ ಕಾಲದಿಂದಲೂ ಕಂಡುಬರುತ್ತಾರೆ. ಶ್ರೀಕೃಷ್ಣರುಕ್ಮಿಣಿ ಸರಸ-ವಿರಸ ಜಗಳಗಳು ಪ್ರತಿಯೊಂದು ಮನೆಯಲ್ಲಿರುವ ವಿಷಯವಾಗಿದೆ. ರುಕ್ಮಿಣಿ-ಭಾಮೆಯರಂತೆ ಕದನವಾಡುವ ಸತಿಯರು ಸಹ ಇರುವರು. ಹೆಂಡತಿಯರ ಕಾಟಕ್ಕೆ ಕೈಹೊತ್ತುನಿಂತ ಗಂಡಸರು, ಹಲವರು ಗಂಡ ನೀತಿಗೆ ಮುನಿಸಿಕೊಳ್ಳುವ ಸತಿಯರು, ಶ್ರೀಕೃಷ್ಣ ಸತ್ಯಭಾಮರ ಮುನಿಸು, ಈ ಎಲ್ಲಾ ಸನ್ನಿವೇಶಗಳು ಪ್ರೇಕ್ಷಕರ ಮಧ್ಯೆ ಸುಳಿಯುವ ಸಂಗತಿಗಳೇ ಆಗಿವೆ. ಶ್ರೀಕೃಷ್ಣನು ದೈವವಾಗಿ, ಜನತೆಯ ನಾಯಕನಾಗಿ, ದೇವರಾಟ ಮತ್ತು ಮಾನವರಾಟಕ್ಕೆ ಇಲ್ಲಿ ಅಂತರವಿಲ್ಲದೆ, ಪಾರಿಜಾತ ಮಾನವನ ಸಹಜ ರಾಗದ್ವೇಷಗಳ ಕಥನವೇ ಆಗಿದೆ. ಹೀಗಾಗಿ ಪಾರಿಜಾತದ ಕಥಾವಸ್ತು ನಮ್ಮ ಬದುಕಿನ ಕಥಾವಸ್ತುವಾಗಿ ನಿಲ್ಲುತ್ತದೆ.

ಪ್ರೇಕ್ಷಕರ ಮನಸ್ಸಿನಲ್ಲಿ ಆ ಪಾತ್ರಗಳು ನಾವು ಎನ್ನುವಷ್ಟರ ಮಟ್ಟಿಗೆ ಪಾರಿಜಾತ ನಾಟಕ ನಡೆಯುತ್ತಿದೆ. ಪ್ರೇಕ್ಷಕರ ಮನಸ್ಸನ್ನು ಸೆರೆ ಹಿಡಿದುಕೊಂಡು, ತನ್ನ ಮಾಯದ ಮೋಡಿಯಲ್ಲಿ ಮುಳುಗಿಸಿಬಿಡುತ್ತದೆ. ಈ ನಾಟಕವನ್ನು ಎಷ್ಟು ಸಲ ನೋಡಿದರೂ ಸಹ ಬೇಸರವಾಗುವುದಿಲ್ಲ.

ಭಾರತದಲ್ಲಿ ಪುರಾಣಗಳು ಕೀರ್ತನೆಗಳು, ನಾಟಕಗಳು, ಒಂದಿಲ್ಲೊಂದು ರೀತಿಯಲ್ಲಿ ಭಕ್ತಿಪ್ರಧಾನ ವಾಗಿವೆ. ಹಾಗೆ ಶ್ರೀಕೃಷ್ಣಪಾರಿಜಾತ ಶ್ರೀಕೃಷ್ಣ ರುಕ್ಮಿಣಿಯರ ಕುರಿತು ಕಥನವಾಗಿದೆ. ಜೊತೆಗೆ ವೈಷ್ಣವ ಪಂಥದವರು ಶ್ರೀಕೃಷ್ಣನು ವಿಷ್ಣುವಿನ ಅವತಾರಪುರುಷನೆಂದು, ಶ್ರೀಕೃಷ್ಣಪಾರಿಜಾತವನ್ನು ಧರ್ಮ ಪ್ರಚಾರಕ್ಕಾಗಿಯೂ ಬೆಳೆಸಿಕೊಳ್ಳಲಾಗಿದೆ. ವೈಷ್ಣವ ಪಂಥದ ಪ್ರಚಾರಕ್ಕಾಗಿ ದಾನ ಪಂಥದವರನ್ನು ಬಳಸಿಕೊಂಡ ಹಾಗೆ "೧೨ನೇ ಶತಮಾನದಿಂದಲೇ ಭಕ್ತಿ ಆಂದೋಲನದ ಅಂಗವಾಗಿ ಗುಡಿಗುಂಡಾರಗಳಲ್ಲಿ ದೇವಮಂದಿರಗಳಲ್ಲಿ, ದೇವರ 'ರಂಗಭೋಗ'ಕ್ಕಾಗಿ ನೃತ್ಯಗಾಯನಗಳನ್ನೇ ಕಸಬಾಗಿರುವ ಒಂದು ಸಂಪ್ರದಾಯವನ್ನು ನಿಯೋಜಿಸಲಾಯಿತು. ಈ ಸಂಪ್ರದಾಯದವರು ದೇವರಲ್ಲಿ ಅನನ್ಯ ಭಕ್ತಿಯನ್ನಿಟ್ಟ 'ದೇವದಾಸರು' ಈ ದಾಸರು ಸಂಪ್ರದಾಯವೇ ಬೆಳೆದು 'ಸಮಾಜಕುಲ'ದ ರೂಪವನ್ನು ತಳೆಯಿತು. ವಂಶ ಪರಂಪರಾಗತವಾಗಿ ಈ ಜನ ದೇವರ ಉತ್ಸವದ ಕಾಲದಲ್ಲಿ ನೃತ್ಯ, ಗಾಯನ, ಅಭಿನಯಗಳ ಸೇವೆಯನ್ನು ಸಲ್ಲಿಸುವವರಾದರು. ಭಗವಂತನ ದಶರೂಪಗಳನ್ನು ಅವತಾರ ಲೀಲೆಗಳನ್ನು ನಟಿಸುವ ಪರಿಪಾಠ ಇಂದಿಗೂ ಇದೆ. ಗ್ರಾಮೀಣ ದೇವಾಲಯಗಳಲ್ಲಿ ಪಲ್ಲಕ್ಕಿ ಸೇವೆ, ಜಾತ್ರೆ, ಉತ್ಸವಗಳಲ್ಲಿ ದೇವರ ಮುಂದೆ ದಾಸರು ಹಾಡುವ ಕುಣಿಯುವ ಪರಿಪಾಠವಿದೆ. ಇವರಿಗೆ ಆ ಕಾರ್ಯಕ್ಕಾಗಿ ಪರಂಪರೆಯ ದತ್ತಿಗಳೂ ಇವೆ. ಈ ದಾಸರಲ್ಲಿ ಹೆಣ್ಣು ದಾಸರು. ಗಂಡುದಾಸರು ಎಂದು ಸ್ತ್ರೀ ಪುರುಷರಿಬ್ಬರಿಗೂ ನೃತ್ಯಗೀತೆ ಸೇವೆ ಸಲ್ಲಿಸುವ ಅಧಿಕಾರವಿದೆ. ಭಗವಂತನ ಲೀಲಾನಾಟಕಗಳನ್ನು, ಹೆಚ್ಚಾಗಿ ಶ್ರೀಕೃಷ್ಣಲೀಲೆಗಳನ್ನು ಅಭಿನಯಿಸುವ ಪರಿಪಾಠವೇ ದಾಸರಾಟದ ಪರಂಪರೆಗೆ ಮೂಲವಾಯಿತು. ಈ ಭಾಗವತ ಲೀಲಾನಾಟಕಗಳಿಗೆ ಶ್ರೀ ಚೈತನ್ಯ ದೇವನ ದಕ್ಷಿಣದ ಸಂಚಾರ "ರಾಧಾಕೃಷ್ಣ" ಭಕ್ತಿಯು ಮೆರುಗನ್ನು ಕೊಟ್ಟಿತು. ಅದರ ಫಲವಾಗಿ ರಾಧಾಕೃಷ್ಣರ ಆಟಗಳು ಬೆಳಕಿಗೆ ಬಂದವು."[೪]

## ೧. ಶ್ರೀಕೃಷ್ಣ ಪಾರಿಜಾತ ರಚನೆ, ಹುಟ್ಟು ಮತ್ತು ಬೆಳವಣಿಗೆ

ಶ್ರೀಕೃಷ್ಣ ಪಾರಿಜಾತ ಬಯಲಾಟಗಳಲ್ಲಿ ಜನಪ್ರಿಯವಾದ ಆಟವಾಗಿದೆ. ಸಂಗೀತ, ಹಾಸ್ಯ, ಆಧ್ಯಾತ್ಮಗಳನ್ನು ಒಳಗೊಂಡ ರಸಭರಿತ ಕಥನವಾಗಿದೆ. "ದಾಸರು ಕೃಷ್ಣಲೀಲೆಗಳನ್ನು ಹಾಡಿದರು, ಕುಣಿದರು, ಜನರನ್ನು ಕುಣಿಸಿದರು. ದೇವಸ್ಥಾನಗಳಲ್ಲಿ ದೇವರ ಆರಾಧನೆಯ ಒಂದು ಅಂಗವಾಗಿ ಈ ಹಾಡು, ಕುಣಿತ ಅಭಿನಯಗಳು ನಡೆಯ ಹತ್ತಿದವು. ಇದೇ ರಂಗಭೋಗದ ಮೂಲಸ್ರೋತ್ರ."[೫] ದಾಸರು

ದೇವಸ್ಥಾನಗಳಲ್ಲಿ ರಂಗಸೇವೆ ಮಾಡಲು ಪರಂಪರೆ ಪ್ರಾರಂಭವಾಗಿತ್ತು. ದಾಸರು ಹಾಡುವುದು, ಕುಣಿಯುವುದು, ಭಾವನಾತ್ಮಕ ಘಟನೆಗಳನ್ನು ಅಭಿನಯಿಸುತ್ತಿದ್ದರು. ಹೀಗೆ ಇವರು ರಂಗಪ್ರವೇಶ ಮಾಡಿದರು. ದಾಸರ ಸ್ತ್ರೀ ಪುರುಷರು ಕೃಷ್ಣ ಆರಾಧನೆ ಪೂರಕವಾಗಿ ರಂಗಸೇವೆ ಮಾಡುತ್ತಿದ್ದರು. ದಾಸರಾಟವಾದ ರಾಧಾಕೃಷ್ಣರಾಟದಿಂದ ಪ್ರೇರಣೆ ಪಡೆದುಕೊಂಡು, ಶ್ರೀಕೃಷ್ಣ ಪಾರಿಜಾತ ರೂಪ ತಾಳಿ "ಗೊಲ್ಲ-ಗೋಪಿಯರ ಲೀಲೆಯ ಒಂದಂಶ ಇನ್ನೂ ಕೃಷ್ಣ ಪಾರಿಜಾತದ ದಾಸರಾಟದಿಂದ ಅಭಿನೀತವಾಗುತ್ತಿದೆ."[೬] ಶ್ರೀಕೃಷ್ಣ ಪಾರಿಜಾತ ದಾಸರಾಟದಿಂದ ರಂಗಪ್ರಕಾರವಾಗಿ ಬೆಳೆದುಬಂದಿತು. ಈ ಆಟ ಜನಪ್ರಿಯವಾಗಲು ಮುಖ್ಯವಾಗಿ ಮೂರು ಹಂತಗಳನ್ನು ಗುರುತಿಸಬಹುದು.

೧. ಅಪರಾಳ ತಮ್ಮಣ್ಣನ ಕಾಲಘಟ್ಟ

೨. ಕುಲಗೋಡ ತಮ್ಮಣ್ಣನ ಕಾಲಘಟ್ಟ

೩. ಶ್ರೀಮತಿ ಕೌಜಲಗಿ ನಿಂಗಮ್ಮನ ಕಾಲಘಟ್ಟ

### ೧.೧. ಅಪರಾಳ ತಮ್ಮಣ್ಣನ ಕಾಲಘಟ್ಟ

"ಅಪರಾಳ ತಮ್ಮಣ್ಣ ರಾಯಚೂರುನಿಂದ ಸುಮಾರು ೧೨-೧೩ ಕಿ.ಮೀ. ದೂರದಲ್ಲಿ ಇರುವ ಅಪರಾಳವೆಂಬ ಗ್ರಾಮದಲ್ಲಿ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದನು. ಕನ್ನಡ ಸಂಸ್ಕೃತಿ ಭಾಷೆಗಳಲ್ಲಿ ಪರಿಣಿತರಾಗಿದ್ದನು. ಪುರಾಣ ಶಾಸ್ತ್ರಗಳು ಅರಿತುಕೊಂಡಿದ್ದರು. ಸಂಗೀತ, ನೃತ್ಯ, ಅಭಿನಯಗಳ ಪರಿಣಿತಿಯ ಸಹ ಹೊಂದಿದ್ದನು. ಇವರ ಕಾಲದಲ್ಲಿ ಕರ್ನಾಟಕ ಸಂಗೀತವು ಕರ್ನಾಟಕ ಪ್ರಾಂತ್ಯದ ತುಂಬೆಲ್ಲ ವ್ಯಾಪಿಸಿದ್ದಿತು. ತಮ್ಮಣ್ಣ ಪ್ರೌಢ ವಯಸ್ಸಿನ ನನಸಿದ್ದಾಗ, ಕನಸಿನಲ್ಲಿ ದೇವರು ಪ್ರತ್ಯಕ್ಷವಾಗಿ ಆತನ ಲೀಲೆಯನ್ನು ಹೇಳುವ ಕೃತಿಯನ್ನು ರಚಿಸುವ ಆದೇಶ ದೊರೆಯಿತು.

ಊರಲ್ಲಿ ಆಗಾಗ ನಡೆಯುತ್ತಿದ್ದ ಬಯಲಾಟಗಳನ್ನು ಅಪರಾಳ ತಮ್ಮಣ್ಣ ನೋಡುತ್ತಿದ್ದನು. ಆಟ ಆಡುವವರಿಗೆ, ಹಾಡು, ಸಂಗೀತ, ನೃತ್ಯಗಳನ್ನು ಕಲಿಸುವ ಮಾಸ್ತರನಾಗಬೇಕು ಎಂಬ ಆಶೆ ಆತನಿಗಿತ್ತು. ಶ್ರೀಕೃಷ್ಣಲೀಲೆಯ ಪ್ರೇರಣೆಯಿಂದ ಶ್ರೀಕೃಷ್ಣ ಪಾರಿಜಾತ ಕೃತಿಯನ್ನು ಈತ ರಚನೆ ಮಾಡಿದನು."[೭]

### ಅಪರಾಳ ತಮ್ಮಣ್ಣನ ಕೃತಿ

"ಅಪರಾಳ ತಮ್ಮಣ್ಣನು ತನ್ನ ಕೃತಿ ಶ್ರೀಕೃಷ್ಣ ಪಾರಿಜಾತವನ್ನು ಕಾವ್ಯ ರೂಪದಲ್ಲಿ ರಚನೆ ಮಾಡಿದ್ದಾನೆ. ಮೊದಲಿಗೆ ದೇವತಾಸ್ತುತಿ ಮತ್ತು ಶಾರದಾಸ್ತುತಿ ಹೇಳಿದ ನಂತರ ಗಣಪತಿ ಸ್ತುತಿ ಹೇಳುತ್ತಾರೆ. ಇದು ಒಂದು ಹಾಡುಗಬ್ಬ ರೂಪದಲ್ಲಿದೆ. ಗಣಪತಿ ಸ್ತುತಿ ನಂತರ ಪಾರಿಜಾತದ ಆಟ ಪ್ರಾರಂಭವಾಗುತ್ತದೆ. ಮೊದಲಿಗೆ ಭೂದೇವಿ ಶ್ರೀ ವಿಷ್ಣುವಿನ ಬಳಿಗೆ ಬಂದು ಭೂಮಿಯ ಮೇಲೆ

ಅಸುರರ ಹಿಂಸೆ ತಾಳಲಾಗದೆ ಕಾಪಾಡು ಎಂದು ಬೇಡಿ ಕೊಳ್ಳುತ್ತಾಳೆ. ಅದಕ್ಕೆ ಶ್ರೀವಿಷ್ಣು ತಾನೇ ಅಸುರರನ್ನು ಸಂಹಾರ ಮಾಡುವುದಾಗಿ ಹೇಳುತ್ತಾನೆ. ಶ್ರೀವಿಷ್ಣು ದೇವಕಿಯ ಮಗನಾಗಿ, ಶ್ರೀಕೃಷ್ಣನಾಗಿ ಜನಿಸಿ, ಕಂಸಾಸುರ, ಶಿಶುಪಾಲ ಹಾಗೂ ಅಸುರರನ್ನು ಸಂಹಾರ ಮಾಡಿ ರುಕ್ಮಿಣಿ ಸತ್ಯಭಾಮ ಜೊತೆ ಸುಖವಾಗಿರುತ್ತಾನೆ. ಶ್ರೀಕೃಷ್ಣನನ್ನು ನೋಡಲು ಬಂದ ನಾರದನು ದೇವಲೋಕದಿಂದ ತಂದಿದ್ದ ಪಾರಿಜಾತವನ್ನು ಶ್ರೀಕೃಷ್ಣನಿಗೆ ಕೊಡುತ್ತಾನೆ. ಕೃಷ್ಣನು ಹೂವನ್ನು ತೆಗೆದುಕೊಂಡು ರುಕ್ಮಿಣಿಯ ಮುಡಿಯಲ್ಲಿಡುತ್ತಾನೆ. ಕಲಹಪ್ರಿಯನಾದ ನಾರದನು, ಸತ್ಯಭಾಮೆಯ ಬಳಿಗೆ ಹೋಗಿ ಪಾರಿಜಾತ ಹೂವನ್ನು, ಕೃಷ್ಣನು ರುಕ್ಮಿಣಿಯ ಮುಡಿಯಲ್ಲಿಟ್ಟನು ಎಂದು ಚಾಡಿ ಹೇಳುತ್ತಾನೆ. ಸತ್ಯಭಾಮೆಯ ಸವತಿ ಮತ್ಸರಕ್ಕೆ ಒಳಗಾಗಿ, ಕೃಷ್ಣ ಕೂಡಲೇ ತನ್ನಲ್ಲಿಗೆ ಬರಬೇಕೆಂದು ಪತ್ರ ಕಳುಹಿಸಿದಳು. ಅದಕ್ಕೆ ಶ್ರೀಕೃಷ್ಣನು ಸಮಾಧಾನದ ಉತ್ತರವನ್ನು ಪತ್ರದ ಮೂಲಕ ಕಳಿಸುತ್ತಾನೆ. ಶ್ರೀಕೃಷ್ಣ ರುಕ್ಮಿಣಿ ಪಗಡೆಯಾಟವಾಡುತ್ತಿರುವಾಗ, ಸತ್ಯಭಾಮೆ ಶ್ರೀಕೃಷ್ಣನನ್ನು ಕರೆದುಕೊಂಡು ಬರುವಂತೆ ದೂತನನ್ನು ಕಳುಹಿಸುತ್ತಾಳೆ. ರುಕ್ಮಿಣಿ ಧೂತನನ್ನು ಅವಮಾನ ಮಾಡುತ್ತಾಳೆ. ಕೋಪಕೊಂಡ ಸತ್ಯಭಾಮ ರುಕ್ಮಿಣಿಯ ಮನೆಗೆ ಬರುತ್ತಾಳೆ. ಕೃಷ್ಣ ಸತ್ಯಭಾಮೆಯನ್ನು ಗಮನಿಸುವುದಿಲ್ಲ. ಭಾಮ ದುಃಖಿಸುತ್ತಲೆ ಶ್ರೀಕೃಷ್ಣನನ್ನು ಮಾತನಾಡಿಸುತ್ತಾಳೆ. ಕೃಷ್ಣ ಸತ್ಯಭಾಮೆಯನ್ನು ಸಮಾದಾನ ಮಾಡುತ್ತಾನೆ. ಆದರೆ ಭಾಮಳಿಗೆ ರುಕ್ಮಿಣಿಯ ಮೇಲೆ ಕೋಪ, ರುಕ್ಮಿಣಿಯನ್ನು ತರಾಟೆಗೆ ತೆಗೆದುಕೊಳ್ಳುತ್ತಾಳೆ. ರುಕ್ಮಿಣಿ ಸತ್ಯಬಾಮ ಇಬ್ಬರು ಜಗಳ ಮಾಡುತ್ತಾರೆ. ಸತ್ಯಬಾಮ ಶಕ್ತಿ ಪೂಜೆಮಾಡಿ ಆರ್ಶೀವಾದ ಪಡೆದುಕೊಂಡು ಹೋಗುತ್ತಾಳೆ. ಸತ್ಯಭಾಮೆ ಜಗದಾಂಬೆಯ ಪೂಜೆಯನ್ನು ಮಾಡುತ್ತಾಳೆ. ಜಗದಾಂಬೆ ಪ್ರಸನ್ನಳಾಗಿ ಕೃಷ್ಣ ನಿನ್ನಲ್ಲಿಗೆ ಬರುವುದಾಗಿ ಭರವಸೆ ನೀಡುತ್ತಾಳೆ. ಕೃಷ್ಣನು ಸತ್ಯಭಾಮಳ ಮನಸ್ಸಿಗೆ ನೋವು ಮಾಡಿದ್ದೇನೆ ಎಂದು ಪಶ್ಚಾತ್ತಾಪ ಪಡುತ್ತಾನೆ. ಸತ್ಯಭಾಮೆಯ ಮನಸ್ಸನ್ನು ಅರಿಯುವುದಕ್ಕೆ ಕೊರವಂಜಿಯ ರೂಪ ತಾಳುತ್ತಾನೆ. ಕೊರವಂಜಿಯಾಗಿ ಬಂದು ಸತ್ಯಭಾಮೆಗೆ 'ಶ್ರೀಕೃಷ್ಣ ನಿನ್ನ ಮನೆಗೆ ಬರುತ್ತಾನೆ' ಎಂದು ಕಣಿ ಹೇಳುತ್ತಾನೆ. ಕೃಷ್ಣನು ಸತ್ಯಭಾಮೆಯ ಮನೆಗೆ ಬರುತ್ತಾನೆ. ಭಾಮೆಯ ಮುನಿಸು ಕಡಿಮೆಯಾಗಿರುವುದಿಲ್ಲ, ಬಾಗಿಲು ತೆಗೆಯುವುದಿಲ್ಲ ಎಂದು ಹಠ ಹಿಡಿಯುತ್ತಾಳೆ. ಶ್ರೀಕೃಷ್ಣ ದಶಾವತಾರವನ್ನು ವಿವರವಾಗಿ ಹೇಳುತ್ತಾನೆ. ಆಗ ಆಕೆ ಬಾಗಿಲನ್ನು ತೆರೆಯುತ್ತಾಳೆ ಕೃಷ್ಣ ಸತ್ಯಭಾಮಳನ್ನು ಸಮಾಧಾನ ಮಾಡುತ್ತಾನೆ. ಭಾಮ ಪಾರಿಜಾತದ ವೃಕ್ಷವನ್ನು ಮನೆ ಅಂಗಳದಲ್ಲಿ ನೆಡುವಂತೆ ಕೇಳಿಕೊಳ್ಳುತ್ತಾಳೆ. ಅದಕ್ಕೆ ಕೃಷ್ಣ ಒಪ್ಪಿಕೊಳ್ಳುತ್ತಾನೆ. ಅಷ್ಟರಲ್ಲಿ ಇಂದ್ರ ತನ್ನನ್ನು ನರಕಾಸುರನ ಬಾಧೆಯಿಂದ ಪಾರು ಮಾಡುವಂತೆ ಬೇಡಿಕೊಳ್ಳುತ್ತಾನೆ. ಕೃಷ್ಣ ಸತ್ಯಭಾಮೆಯ ಜೋತೆ ಹೋಗಿ ನರಕಾಸುರನನ್ನು ಸಂಹಾರ ಮಾಡುತ್ತಾನೆ. ಅವನ ಬಂಧನದಲ್ಲಿದ್ದ ಹದಿನಾರು ಸಾವಿರ ಸ್ತ್ರೀಯರನ್ನು ಬಂಧನದಿಂದ ಮುಕ್ತ ಮಾಡುತ್ತಾನೆ. ಸರ್ವ ಅದಿತಿಯ ಕರ್ಣಕುಪಲಗಳನ್ನು ಒಪ್ಪಿಸುತ್ತಾನೆ. ಬರುವಾಗ ಈ ಸತ್ಯಭಾಮೆ ಪಾರಿಜಾತದ ವೃಕ್ಷವನ್ನು ಗಂಡನ ಜೊತೆ ತೆಗೆದುಕೊಂಡು

ಬರುವಾಗ ಇಂದ್ರ ತಡೆಯುತ್ತಾನೆ. ಮತ್ತೆ ಇಂದ್ರನ ಜೊತೆ ಕೃಷ್ಣನ ಯುದ್ಧ ನಡೆಯುತ್ತದೆ. ಇಂದ್ರನು ಸೋತು ಪಾರಿಜಾತ ವೃಕ್ಷ ತಂದು ಸತ್ಯಭಾಮೆಯ ಮನೆಯಂಗಳದಲ್ಲಿ ನೆಡುತ್ತಾನೆ. ಪಾರಿಜಾತದ ಹೂಗಳು ರುಕ್ಮಿಣಿಯ ಮನೆಬಾಗಿಲಿಗೆ ಬಂದು ಬೀಳುತ್ತವೆ. ರುಕ್ಮಿಣಿಯ ಅಹಂಕಾರ ಭಂಗವಾಗುತ್ತದೆ. ಕೃಷ್ಣನು ಸತ್ಯಭಾಮಳಿಗೆ ಅಹಂಕಾರ ತ್ಯಜಿಸುವಂತೆ ಹೇಳುತ್ತಾನೆ. ಸತ್ಯಭಾಮ ತನ್ನ ತಪ್ಪನ್ನು ಅರಿತುಕೊಂಡು ರುಕ್ಮಿಣಿಯ ಮನೆಗೆ ಬರುತ್ತಾಳೆ. ರುಕ್ಮಿಣಿ ಪ್ರೀತಿಯಿಂದ ಸ್ವಾಗತಿಸುತ್ತಾಳೆ. ನಂತರ ಶ್ರೀಕೃಷ್ಣನು ಹದಿನಾರು ಸಾವಿರ ಸ್ತ್ರೀಯರ ಜೊತೆ ಮದುವೆಯಾಗುತ್ತಾನೆ. ಇಲ್ಲಿಗೆ ಶ್ರೀಕೃಷ್ಣ ಪಾರಿಜಾತ ನಾಟಕ ಮುಕ್ತಾಯವಾಗುತ್ತದೆ."[೮]

ಶ್ರೀಕೃಷ್ಣ ಪಾರಿಜಾತ ಕೃತಿ ರಾಯಚೂರಿನಲ್ಲಿ ಹುಟ್ಟಿಕೊಂಡು, ಉತ್ತರ ಕರ್ನಾಟಕದಲ್ಲಿ ಬೆಳವಣಿಗೆ ಕಂಡಿತು. ಅಪರಾಳ ತಮ್ಮಣ್ಣ ಪಾರಿಜಾತಕ್ಕೆ ಕೊರವಂಜಿಯ ಪಾತ್ರವನ್ನು ಮೊಟ್ಟಮೊದಲಿಗೆ ಪರಿಚಯಿಸಿದ ವ್ಯಕ್ತಿಯಾಗಿದ್ದಾನೆ. ಅಪರಾಳ ತಮ್ಮಣ್ಣನ ಕೃತಿಯ ಹೊರಬರುವ ಮೊದಲೇ ಪಾರಿಜಾತ ಆಟವನ್ನು ಆಡುತ್ತಿದ್ದರು. ಆದರೆ ಅದರಲ್ಲಿ ಕೊರವಂಜಿಯ ಪಾತ್ರ ಇರಲಿಲ್ಲ. "ಅಪರಾಳ ತಮ್ಮಣ್ಣ ಕೃತಿ ಅರ್ಧದಲ್ಲಿ ನಿಲ್ಲಿಸಿದನಂತೆ. ನಂತರ ಸಿರುಗುಪ್ಪ ಸದಾಶಿವು ಸಂಪೂರ್ಣಗೊಳಿಸಿದನು. ಎಂಬ ಉಲ್ಲೇಖಗಳು ಸಹ ಕಂಡುಬರುತ್ತವೆ."[೯]

### ೧.೨. ಕುಲಗೋಡ ತಮ್ಮಣ್ಣನ ಕಾಲಘಟ್ಟ

ಕುಲಗೋಡ ತಮ್ಮಣ್ಣ "ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಕುಲಗೋಡ ಗ್ರಾಮದವರು. ಈತನ ಆರಾಧ್ಯ ದೈವ 'ಕುಲಗೋಡ ಮಾರುತಿ', 'ಪಾರಿಜಾತದ ಹಾಡುಗಳಲ್ಲಿ' ನೋಡಿರೋ, ಬಲಭೀಮನ ದಯವಿದು" ಕೊನೆಯ ಸಾಲಿಗೆ ಕಂಡುಬರುತ್ತದೆ. ತಮ್ಮಣ್ಣ ಚಿಕ್ಕ ವಯಸ್ಸಿನಲ್ಲಿ ಬಯಲಾಟ ಭಜನೆಗಳ ಸಂಗೀತ ತುಂಬಾ ಆಸಕ್ತಿ, ಒಂದು ಸಲ ತಮ್ಮಣ್ಣ ಹೆಳವನ ವೇಷ ಹಾಕಿಕೊಂಡು ಬಂದು ಅವರ ತಂದೆಗೆ ತಮ್ಮ ವಂಶಾವಳಿಯನ್ನು ಹೇಳಿ ಆಕಳು, ಕರು ಪಡೆದುಕೊಂಡನಂತೆ. ಇವರು ಚಿನಿವಾರ ಮನೆತನಕ್ಕೆ ಸೇರಿದವರು. ಉತ್ತರ ಕರ್ನಾಟಕದಲ್ಲಿ ಪಾರಿಜಾತವನ್ನು ಉನ್ನತ ಶಿಖರಕ್ಕೆ ಏರಿಸಿದ ಕೀರ್ತಿ ಕುಲಗೋಡ ತಮ್ಮಣ್ಣನಿಗೆ ಸೇರುತ್ತದೆ."[೧೦]

### ಕುಲಗೋಡ ತಮ್ಮಣ್ಣನ ಕೃತಿ

"ಕುಲಗೋಡ ತಮ್ಮಣ್ಣ, ಶ್ರೀಕೃಷ್ಣ ಪಾರಿಜಾತವನ್ನು ಬಯಲಾಟ ರಂಗಭೂಮಿಗೆ ಪರಿಚಯಿಸಿದ ವ್ಯಕ್ತಿಯಾಗಿದ್ದಾನೆ. ತನ್ನ ಏಳೇ ಏಳು ವಯಸ್ಸಿನಿಂದ ಬಯಲಾಟ, ಭಜನೆ, ಸಂಗೀತ, ಅಭಿನಯದ ಬೆನ್ನು ಹತ್ತಿದ ತಮ್ಮಣ್ಣನಿಗೆ ವಿದ್ಯೆ ಕಲಿಯುವುದರಲ್ಲಿ ಆಸಕ್ತಿ ಇರಲಿಲ್ಲ. ಅಪರಾಳ ತಮ್ಮಣ್ಣನ ಕೃತಿಯಲ್ಲಿ

ಹೊಸದಾಗಿ ಗೋಲ್ಲತಿಯ ಪ್ರವೇಶ ಹಾಗೂ ಭಾಗವತ ಮತ್ತು ಮರಿಭಾಗವತರ ಪರಿಚಯ. ಹಾಗೂ ವಿಶೇಷವಾಗಿ ಸಂಗೀತ ಮತ್ತು ಹಾಡುಗಳನ್ನು ಅಳವಡಿಸಲಾಗಿದೆ. ಪಾತ್ರಕ್ಕೆ ತಕ್ಕಂತೆ ಹಾಡುಗಳನ್ನು ಜೊತೆ ಸೇರಿಸಲಾಗಿದೆ. ಕುಲಗೋಡ ತಮ್ಮಣ್ಣ ಪಾರಿಜಾತಕ್ಕೆ ಶುಚಿಯನ್ನು ತಂದುಕೊಟ್ಟಿದ್ದಾನೆ. ಇದರಿಂದಾಗಿ ಸಂಗೀತ, ಹಾಸ್ಯ, ಆಧ್ಯಾತ್ಮಿಕ ಇವುಗಳನ್ನು ಒಳಗೊಂಡ ಶೃಂಗಾರ ಕಾವ್ಯವಾಗಿ ಪಾರಿಜಾತ ಹೊರಹೊಮ್ಮಿತು. ಜೊತೆಗೆ ಹಾಸ್ಯಕ್ಕೆ ಹೆಚ್ಚು ಒತ್ತು ಕೊಡಲಾಯಿತು. 'ನೋಡಿರೊ ಬಲ ಭೀಮನ ದಯವಿದು' ಎನ್ನುವ ವಾಕ್ಯ ಚಿಕ್ಕ ವಯಸ್ಸಿನ ಹುಡುಗರಿಂದ ವೃದ್ಧರವರೆಗೆ ಮೆಚ್ಚುಗೆಯನ್ನು ಪಡೆದುಕೊಂಡಿತು. ಕುಲಗೋಡ ತಮ್ಮಣ್ಣ ಬಯಲಾಟದ ಪಾರಿಜಾತ ರಂಗಭೂಮಿಗೆ ಪರಿಚಯಿಸಿದ ವ್ಯಕ್ತಿಯಾಗಿದ್ದಾನೆ. ಕುಲಗೋಡ ತಮ್ಮಣ್ಣ ಪಾರಿಜಾತ ಆಟ ಆಡುವ ಸಂದರ್ಭದಲ್ಲಿ ಶಿಸ್ತುಬದ್ಧ ಗಂಭೀರತೆಯನ್ನು ಹೊಂದಿದ್ದನು. "ಪಾರಿಜಾತ ಮೇಳದಲ್ಲಿ ಕುಲಗೋಡ ತಮ್ಮಣ್ಣನ ಪ್ರೇಯಸಿ ಅದರಲ್ಲಿ ಸತ್ಯಭಾಮೆಯ ಪಾತ್ರವನ್ನು ಅಭಿನಯಿಸುತ್ತಿದ್ದಳು. ಒಂದು ದಿನ ಆಟ ಒಳ್ಳೇ ರಭಸದಲ್ಲಿದ್ದಾಗ ಅವಳು ತನ್ನ ಗಾಯನದಲ್ಲಿ ಎಲ್ಲಿಯೋ ತಾಳ ತಪ್ಪಿಬಿಟ್ಟಳು. ಅಲ್ಲಿಯೆ ನಿಂತು ಸಾಥೀ ಕೊಡುತ್ತಿದ್ದ ತಿಮ್ಮಣ್ಣನಿಗೆ' ಅಸ್ವಾರಸ್ಯದಿಂದ ರೋಷ ಹುಟ್ಟಿ ಕೈಯಲ್ಲಿಯ ತಾಳವನ್ನೇ ಅವಳತ್ತ ಎಸೆದನಂತೆ. ಅದು ತಲೆಯ ಮರ್ಮ ಸ್ಥಳಕ್ಕೆ ತಗಲಿ' ಅದೇ ಸ್ಥಳದಲ್ಲಿಯೇ ಅವಳು ಪ್ರಾಣಬಿಟ್ಟಳಂತೆ. ಕಾನೂನಿನನ್ವಯ ತಮ್ಮಣ್ಣನು ಬಂಧಿತನಾದನು. ಮುಂದೆ ಮೊಕದ್ದಮೆ ನಡೆದು ಇಂಗ್ಲೀಷು ಜಡ್ಜನು ಅವನಿಗೆ ದೋಷಿಯೆಂದು ನಿರ್ಣಯಿಸಿ ಫಾಸೀಶಿಕ್ಷೆ ವಿಧಿಸಿದನು. ಅಂದಿನ ಪದ್ಧತಿಯಂತೆ ಕಾನೂನಿನ ಪ್ರಕಾರ ಬಂಧಿಸಲಾಗಿತು. ತಮ್ಮಣ್ಣನನ್ನು ಗಲ್ಲಿಗೆ ಏರಿಸುವ ಮುಂಚೆ 'ನಿನ್ನ ಕೊನೆಯಾಸೆಯೇನಾದರೂ ಇದ್ದರೆ ಹೇಳು' ಎಂದಾಗ 'ಒಂದು ಸಲ ಪಾರಿಜಾತ ಆಟದಲ್ಲಿ ಅಭಿನಯಿಸಲು ಇಚ್ಚೆಯಿದೆ' ಎಂದನು. ಅದಕ್ಕೆ ನ್ಯಾಯಾಧೀಶರ ಸಮ್ಮುಖದಲ್ಲಿಯೇ ಪಾರಿಜಾತ ಆಟ ಪ್ರಾರಂಭವಾಯಿತು. ನಾಟಕ ನಡೆಯುತ್ತಿದ್ದ ಸಂದರ್ಭದಲ್ಲಿ, ಸತ್ಯಭಾಮ ಹಾಡುತ್ತಿರುವಾಗ ಅಪಸ್ವರ ಬಂದುಬಿಟ್ಟಿತಂತೆ. ನ್ಯಾಯಾಧೀಶರೇ ಟೇಬಲ್ ಗುದ್ದಿದರಂತೆ, ಇನ್ನು ಕುಲಗೋಡು ತಮ್ಮಣ್ಣನ ಮನುಸ್ಸು ಎಷ್ಟು ತಲ್ಲಣಗೊಂಡಿರಬಹುದು ಎಂದು ಯೋಚಿಸಿದ ನ್ಯಾಯಾಧೀಶರು, ತಮ್ಮಣ್ಣನ ಮನಸ್ಸನ್ನು ಅರಿತುಕೊಂಡು ತಮ್ಮಣ್ಣನನ್ನು ಬಿಡುಗಡೆ ಮಾಡಿದರು."[೧೧] ಕುಲಗೋಡ ತಮ್ಮಣ್ಣ ಆಟದಲ್ಲಿ ತಲ್ಲೀನನಾಗುತ್ತಿದ್ದ. ಶ್ರೀಕೃಷ್ಣ ಪಾರಿಜಾತಕ್ಕೆ ಬಯಲಾಟ ರಂಗಭೂಮಿಯಲ್ಲಿ ಭದ್ರ ತಳಹದಿಯನ್ನು ಹಾಕಿದನು.

ಕುಲಗೋಡು ತಮ್ಮಣ್ಣನ ಶ್ರೀಕೃಷ್ಣ ಪಾರಿಜಾತ ಕಥೆ

"ಶ್ರೀಕೃಷ್ಣ ಪಾರಿಜಾತ ನಾಟಕ ಪ್ರಾರಂಭವಾಗುವ ಮುನ್ನ ಗಣಪತಿಯ ಸ್ತುತಿ ಹೇಳಲಾಗುತ್ತಿದೆ. ಈ ಸನ್ನಿವೇಶದ ಭಾಗವತ ಮತ್ತು ಮರಿಭಾಗವತ ಸಂಭಾಷಣೆ ಪ್ರಾರಂಭವಾಗುತ್ತದೆ. ಗಣಪತಿಯ

ಆಕಾರ, ಪೂಜೆ ವಿಧಾನಗಳ ಬಗ್ಗೆ ಮರಿಭಾಗವತ ಅಪಾರ್ಥ ಕಲ್ಪಿಸುತ್ತಾನೆ. ಅವನ ವ್ಯಕ್ತಿತ್ವ ಚೇಷ್ಟೆಯ ರೀತಿಯಲ್ಲಿ ಕಾಣುತ್ತದೆ. ಭಾಗವತನು ಸಹ ಮರಿಭಾಗವತ ಚೇಷ್ಟೆಯನ್ನು ಖಂಡಿಸುತ್ತಾ ಸರಳವಾಗಿ ಪ್ರೇಕ್ಷಕರಿಗೆ ಅರ್ಥವಾಗುವ ರೀತಿಯಲ್ಲಿ ಉತ್ತರ ನೀಡುತ್ತಾನೆ.

ಎರಡನೇ ದೃಶ್ಯ ಗೊಲ್ಲತಿಯ ಪ್ರವೇಶವಾಗುತ್ತದೆ. ಗೊಲ್ಲತಿ ಮತ್ತು ದೂತಿಯರ ಸಂಭಾಷಣೆ ನಡೆಯುತ್ತದೆ. ಪ್ರತಿನಿತ್ಯ ನಡೆಯುವ ಹಾಲುಮೊಸರು ಮಾರುವ ಕೊಳುವವರ ವ್ಯಾಪಾರವಾಗುತ್ತದೆ. ದೋತಿ, ಗೊಲ್ಲತಿ ತಂದಿರುವ ಹಾಲು ಮೊಸರುನ್ನು ಕಡೆಗಣಿಸಿ ಮಾತನಾಡುತ್ತಾಳೆ. ಅದಕ್ಕೆ ಗೊಲ್ಲತಿ ಹಾಲುಮೊಸರನ್ನು ವಿಶಿಷ್ಟವಾದ ಆಧ್ಯಾತ್ಮಿಕ ಅರ್ಥದಲ್ಲಿ ಹೇಳುತ್ತಾಳೆ. ದೂತಿ ನನ್ನ ತಪ್ಪು ಅರಿವಾಯಿತು ಎಂದು ಕೇಳಿಕೊಳ್ಳುತ್ತಾಳೆ. ಇಲ್ಲಿ ಹಾಲುಮೊಸರು ಕೊಳ್ಳುವರು ಯಾರು ಇಲ್ಲ ಎಂದು ಮುಂದಿನ ಓಣಿ ತೋರಿಸುತ್ತಾನೆ. ಅಲ್ಲಿ ಕೊಂಡುಕೊಳ್ಳುತ್ತಾರೆ ಎಂದು ಗೋಕುಲದ ದಾರಿಯನ್ನು ತೋರಿಸುತ್ತಾಳೆ. ನಿನಗೆ ವ್ಯಾಪಾರ ಚೆನ್ನಾಗಿ ಆಗುತ್ತದೆ ಎಂದು ಹೇಳಿ ಕಳುಹಿಸುತ್ತಾಳೆ. ಗೋಕುಲಕ್ಕೆ ಬಂದ ಗೊಲ್ಲತಿಯರನ್ನು ಕಂಡು ಗೋಪಾಲ ಗೋಳು ಹೊಯ್ದುಕೊಳ್ಳುತ್ತಾನೆ. ಗೊಲ್ಲತಿಯ ಬೆಕ್ಕಿನ ಮರಿಯಂತೆ ಕಿಂವಾ ಕಿಂವಾ ಎಂದು ಧ್ವನಿ ಮಾಡುತ್ತಾಳೆ. ಗೊಲ್ಲತಿ ಜೊತೆಯರನ್ನು ಸುಂಕ ಕೇಳುತ್ತಾನೆ. ಅವಳು ಕೊಡುವುದಿಲ್ಲವೆಂದು ಹೇಳುತ್ತಾಳೆ. ಅದಕ್ಕೆ ಗೋಪಾಲ ದಾರಿ ಬಿಡುವುದಿಲ್ಲ ಕೈಹಿಡಿದುಕೊಳ್ಳುತ್ತಾನೆ. ದೋತಿಗೆ ಬಿಡಿಸಲು ಹೇಳುತ್ತಾನೆ. ಕೈಬಿಟ್ಟು ಸೆರಗು ಹಿಡಿದುಕೊಳ್ಳುತ್ತಾನೆ. ಆಗ ಗೊಲ್ಲತಿ 'ಅಪ್ಪ, ಅಣ್ಣ, ಸೆರಗು ಬಿಡು' ಎಂದು ಬೇಡಿಕೊಳ್ಳುತ್ತಾಳೆ. ಅದಕ್ಕೆ ಗೋಪಾಲ 'ನಿನ್ನ ಅಪ್ಪ ಅಲ್ಲ, ನಿಮ್ಮಪ್ಪನ ಅಳಿಯ ನಾನು, ನಿನ್ನ ಅಣ್ಣಾ ಅಲ್ಲ, ನಿಮ್ಮಣ್ಣನ ಭಾವ ನಾನು' ಎಂದು ಗೊಲ್ಲತಿ ಗೋಪಾಲ ಹಾಡಿನ ಮೂಲಕ ಹೇಳುತ್ತಾನೆ. ಈ ಹಾಡು ಸಾಮಾನ್ಯ ಜನರ ಮೆಚ್ಚುಗೆಯನ್ನು ಪಡೆದುಕೊಂಡಿತು.

ಮೂರನೆ ದೃಶ್ಯ ಕೃಷ್ಣರುಕ್ಮಿಣಿಯ ಪ್ರವೇಶವಾಗುತ್ತದೆ. ದೂತಿ ಅವರ ಪರಿಚಯವನ್ನು ಕೇಳುತ್ತಾಳೆ. ಕೃಷ್ಣ ತನ್ನ ಪರಿಚಯ ಮಾಡಿಕೊಳ್ಳುತ್ತಾನೆ. ನನಗೆ ಹಲವು ನಾಮಗಳು ಮುಕುಂದ, ಶ್ರೀಹರಿ, ವಿಷ್ಣು, ಕೇಶವ ಇತ್ಯಾದಿ. ಈ ಜನ್ಮದಲ್ಲಿ ಶ್ರೀಕೃಷ್ಣನಾಗಿ ಅವತಾರ ತಾಳಿದ್ದೇನೆ. ವೈಕುಂಠ ಅದಿಪತಿಯಾದ ನನ್ನನ್ನು ಭೂದೇವಿ ಬೇಡಿ ಭೂಲೋಕಕ್ಕೆ ಕರೆತಂದಳು. ದೈತ್ಯರ ಸಂಹಾರಕ್ಕಾಗಿ ಭಕ್ತರ ಉದ್ಧಾರಕ್ಕಾಗಿ ಅವತಾರಿಸಿದ್ದಾನೆ ಎಂದು ಹೇಳುತ್ತಾನೆ. ಹಾಗೂ ತನ್ನ ಸತಿಯರಾದ ಜಾಂಬುವತಿ, ವೃಂದಿ, ಗಂಧಿಕಾಲಿಂದಿ ತುಲಸಿ, ಸತ್ಯಭಾಮ, ರುಕ್ಮಿಣಿ, ಸಧ್ಯದಲ್ಲಿ ರುಕ್ಮಿಣಿ ಜೊತೆ ಇರುವುದರಿಂದ ದೂತಿ ರುಕ್ಮಿಣಿಯ ಪರಿಚಯ ಕೇಳುತ್ತಾಳೆ. ರುಕ್ಮಿಣಿ ಕ್ಷೀರಸಾಗರದಲ್ಲಿ ತವರುಮನೆ ಇರುವುದಾಗಿ ದ್ವಾರಕೆಯಲ್ಲಿ ಗಂಡಮನೆ. ದೇವರೆ ಅತ್ತೆ ಆಗಬೇಕು, ವಾಸುದೇವ ಮಾವಂದಿರಾಗಬೇಕು, ಬಲರಾಮ ಬಾವಂದಿರಾಗಬೇಕು ಎಂದು ಹೇಳುತ್ತಾಳೆ. ದೂತಿ ಮುಖ್ಯವಾಗಿ ನಿನ್ನ ಗಂಡನ ಹೆಸರು ಬಿಟ್ಟಿಯಲ್ಲಾ ಎಂದು ಕೇಳುತ್ತಾಳೆ. ರುಕ್ಮಿಣಿ

ನಾಚಿಕೆಯಿಂದ ಕೃಷ್ಣನ ಹೆಸರು ಹಾಗೂ ಅವಳ ಸವತಿ ಸತ್ಯಭಾಮಳ ಹೆಸರು ಹೇಳುತ್ತಾಳೆ. ಇಲ್ಲಿಗೆ ಏಕೆ ಬಂದೆ ಎಂದು ದೂತಿ ಕೇಳುತ್ತಾಳೆ. ನನ್ನ ಪತಿದೇವರು ನಾಲ್ಕು ದಿನವಾದರೂ ಮನೆಗೆ ಬಂದಿಲ್ಲ, ಹುಡುಕಲು ಬಂದಿರುವುದಾಗಿ ತಿಳಿಸುತ್ತಾಳೆ. ದೂತಿ ಸಹಾಯ ಮಾಡುತ್ತಾಳೆ. ಅಷ್ಟರಲ್ಲಿ ಕೃಷ್ಣ ಬರುತ್ತಾನೆ. ರುಕ್ಮಿಣಿ ಮುನಿಸಿಕೊಳ್ಳುತ್ತಾಳೆ. ಕೃಷ್ಣರುಕ್ಮಿಣಿಯರು ದೂತಿಯನ್ನು ಮಧ್ಯವರ್ತಿಯಾಗಿ ಮಾತನಾಡುತ್ತಾರೆ. ಕೃಷ್ಣ ಎಲ್ಲಿ ಹೋಗಿದ್ದನೆಂಬುದೇ ರುಕ್ಮಿಣಿಗೆ ಯೋಚನೆಯಾಗಿರುತ್ತದೆ. ರುಕ್ಮಿಣಿ ಕೃಷ್ಣನಿಗೆ ನೀವು ಭಕ್ತಿ ಬಲಿಚಕ್ರವರ್ತಿಯನ್ನು ನೋಡಲು ಹೋದ್ರಿ ಅಥವಾ ನಿಮ್ಮ ಗುರುಗಳಾದ ಸಂದೀಪ ಋಷಿ ಕಾಣಲು ಹೋಗಿದ್ರ. ಅಥವಾ ನಿಮ್ಮ ಭಕ್ತರ ಉದ್ದಾರ ಮಾಡುವುದಕ್ಕೆ ಹೋಗಿದ್ರ ಎಂದು ಹೇಳುತ್ತಾಳೆ. ಕೃಷ್ಣನನ್ನು ದೂಷಿಸುತ್ತಾಳೆ. ಕೃಷ್ಣ ಪ್ರೇಮದಿಂದ ಹತ್ತಿರ ಬಂದು ತನ್ನ ಹಸ್ತವನ್ನು ರುಕ್ಮಿಣಿಯ ಕುಂಭಕುಚಗಳ ಮಧ್ಯದಲ್ಲಿ ಇಡುತ್ತಾನೆ. ತನ್ನ ಎರಡು ಕೈಗಳಿಂದ ಮರೆಮಾಡುತ್ತಾಳೆ ಎಂದು ಕೃಷ್ಣ ಕೇಳುತ್ತಾನೆ. ಅದಕ್ಕೆ ಅವಳು ನೀವು ಹಾಕಿದ ಹೀರಾವಳಿ ಸರಗಳು ತೊಡಕು ಹಾಕಿಕೊಂಡದ್ದವು. ಅವುಗಳನ್ನು ಸರಿಮಾಡಿಕೊಳ್ಳುತ್ತಿದ್ದೆ ನೀವು ಏಕೆ ಸಿಟ್ಟಾಗಿದ್ದೀರಿ? ಎಂದು ಕೇಳುತ್ತಾಳೆ. ಮುಂದೆ ರುಕ್ಮಿಣಿ ಮಾತನಾಡದೆ ಮೌನವಾಗುತ್ತಾಳೆ. ಕೃಷ್ಣ ರುಕ್ಮಿಣಿಯನ್ನು ಸಮಾಧಾನ ಮಾಡುತ್ತಾನೆ.

ಮುಂದಿನ ದೃಶ್ಯದಲ್ಲಿ ಸತ್ಯಭಾಮ ಪ್ರವೇಶ ಮಾಡುತ್ತಾಳೆ. ದೂತಿ ಇವಳ ಪರಿಚಯ ಕೇಳುತ್ತಾಳೆ. ಸತ್ಯಭಾಮ ಸಹ ತವರುಮನೆ ತಂದೆ ಸುಚ್ರಾಚಿತ, ತಾಯಿ ಶಚಿದೇವಿಯವರು, ವಾಸುದೇವ ಮಾವಂದಿರು, ದೇವಕಿ ಅತ್ತೆಯಾಗಬೇಕು, ಬಲರಾಮ ಬಾವಂದಿರಾಗಬೇಕು, ನಾದಿನಿ ಸುಭದ್ರದೇವಿ ಹಾಗೂ ಶ್ರೀಕೃಷ್ಣ ಪ್ರೀತಿಯ ಪತಿ ಎಂದು ಹೇಳಿ ಜೊತೆಗೆ ಸವತಿ ರುಕ್ಮಿಣಿ, ತನ್ನ ಹೆಸರು ಸತ್ಯಭಾಮ ಎಂದು ಹೇಳುತ್ತಾಳೆ. ನಾಲ್ಕು ದಿನವಾದರೂ ನನ್ನ ಗಂಡ ಮನೆಗೆ ಬಂದಿಲ್ಲ ಅವರನ್ನು ಹುಡುಕಿಕೊಂಡು ಬಂದಿರುವುದಾಗಿ ಹೇಳುತ್ತಾಳೆ. ಅದಕ್ಕೆ ದೂತಿ ರುಕ್ಮಿಣಿ ಮನೆಯಲ್ಲಿ ಸಿಕ್ಕಿಬಿದ್ದಿದ್ದಾನೆ ಎಂದು ಹೇಳುತ್ತಾಳೆ. ಅದಕ್ಕೆ ದೂತಿ ಕರೆದುಕೊಂಡು ಬರುವುದಾಗಿ ಹೇಳುತ್ತಾಳೆ.

ಮುಂದಿನ ದೃಶ್ಯದಲ್ಲಿ ನಾರದ ಪ್ರವೇಶವಾಗುತ್ತಾನೆ. ಭಾಗವತ ಅಂದರೆ ದ್ವಾರಪಾಲಕ ನಾರದನ ಪರಿಚಯ ಕೇಳುತ್ತಾನೆ. ನಾರದ ತನ್ನ ಪರಿಚಯ ಮಾಡಿಕೊಂಡು ಕೃಷ್ಣನನ್ನು ನೋಡಲು ಬಂದಿರುವುದಾಗಿ ಹೇಳುತ್ತಾಳೆ. ನಾರದ ಒಳಗೆ ಕೃಷ್ಣನನ್ನು ಕಾಣುತ್ತಾನೆ. ಜೊತೆಗೆ ತಾನು ದೇವಲೋಕದಿಂದ ತಂದಿರುವ ಪಾರಿಜಾತ ಹೂವನ್ನು ಕೃಷ್ಣನಿಗೆ ಕೊಡುತ್ತಾನೆ. ಕೃಷ್ಣ ಆ ಹೂವನ್ನು ರುಕ್ಮಿಣಿಯ ಮುಡಿಯಲ್ಲಿಡುತ್ತಾನೆ. ರುಕ್ಮಿಣಿಗೆ ನಾರದನು ಪಾರಿಜಾತ ಹೂವಿನ ಮಹಿಮೆಯನ್ನು ಹೇಳುತ್ತಾನೆ. ಈ ಹೂವನ್ನು ಯಾರು ಮುಡಿದುಕೊಳ್ಳುವರು ಅವರನ್ನು ಪರಮಾತ್ಮ (ಕೃಷ್ಣ) ಬಿಟ್ಟು ದೂರ ಹೋಗುವುದಿಲ್ಲ ಎಂದು ಹೇಳುತ್ತಾನೆ. ಬಹಳ ದಿನಕ್ಕೆ ಬಂದ ನಾರದನನ್ನು ಊಟಕ್ಕೆ ಸಹ ಕರೆಯುವುದಿಲ್ಲ. ರುಕ್ಮಿಣಿ ಮೇಲೆ

ನಾರದ ಸಿಟ್ಟಾಗುತ್ತಾನೆ. ಪಾರಿಜಾತ ಹೂವಿನ ಸುದ್ದಿಯನ್ನು ಸತ್ಯಭಾಮಗೆ ತಿಳಿಸಲು ಭಾಮೆಯ ಮನೆಗೆ ಬರುತ್ತಾನೆ. ಸತ್ಯಭಾಮ ನಾರದನನ್ನು ಆದರದಿಂದ ಸ್ವಾಗತ ಮಾಡುತ್ತಾಳೆ. ಪಾರಿಜಾತ ತಂದಿರುವ ವಿಷಯ ಹೇಳುತ್ತಾನೆ. ಪಾರಿಜಾತ ಹೂವನ್ನು ಕೃಷ್ಣ ರುಕ್ಮಿಣಿಯ ಮುಡಿಯಲ್ಲಿಟ್ಟನು ಎಂದು ಹೇಳುತ್ತಾನೆ. ಅದಕ್ಕೆ ಸತ್ಯಭಾಮ ಕೋಪಿಸಿಕೊಳ್ಳದೆ "ಅವಳು ನನ್ನ ಅಕ್ಕ ತಾನೆ ಕೊಡಲಿ ಬಿಡಿ" ಎಂದು ಹೇಳುತ್ತಾಳೆ.

ನಾರದ ಪಾರಿಜಾತ ಪುಷ್ಪದ ಮಹಿಮೆಯನ್ನು ತಿಳಿಸುತ್ತಾನೆ. ಆಗ ಸತ್ಯಭಾಮ ತನಗೆ ಕೃಷ್ಣ ಅನ್ಯಾಯ ಮಾಡಿದ್ದಾನೆಂದು ತಿಳಿದು ಕೋಪ ಮಾಡಿಕೊಳ್ಳುತ್ತಾಳೆ. ಆ ಪಾರಿಜಾತ ಹೂವನ್ನು ಪಡೆಯದಿದ್ದರೆ ನಾನು ಸತ್ಯಭಾಮಯೇ ಅಲ್ಲ ಎಂದು ಪ್ರತಿಜ್ಞೆ ಮಾಡುತ್ತಾಳೆ. ನಿನ್ನ ಪ್ರತಿಜ್ಞೆಗೆ ಜಯವಾಗಲಿ ಎಂದು ನಾರದ ಹೇಳಿ ಹೋಗುತ್ತಾನೆ.

ಸತ್ಯಭಾಮ ಕೃಷ್ಣನಿಗೆ ಒಂದು ಪತ್ರ ಬರೆಯುತ್ತಾಳೆ. ನಾರದ ತಂದಿರುವ ಪಾರಿಜಾತ ಹೂವನ್ನು ನನಗೆ ಕಳಿಸಿದರೆ ಪ್ರೇಮ ಇಲ್ಲದಿದ್ದರೆ ಅಪ್ರೇಮವೆಂದು ಬರೆದು, ದೂತಿಯ ಜೊತೆಯಲ್ಲಿ ಕಳುಹಿಸುತ್ತಾನೆ. ಕೃಷ್ಣ ಪತ್ರವನ್ನು ಓದಿ ಪಾರಿಜಾತ ಪುಷ್ಪವನ್ನು ಕೊಡಲಾಗುವುದಿಲ್ಲ. ಅದು ರುಕ್ಮಿಣಿಗೆ ಕೊಟ್ಟಿರುವುದಾಗಿ ಪತ್ರ ಬರೆಯುತ್ತಾನೆ. ದೂತಿ ಕೃಷ್ಣನನ್ನು ಬರಬೇಕು ಎಂದು ತಿಳಿಸುತ್ತಾಳೆ. ಅದಕ್ಕೆ ದೂತಿಗೆ ರುಕ್ಮಿಣಿ ಅವಮಾನ ಮಾಡಿಕಳುಹಿಸುತ್ತಾಳೆ. ಸತ್ಯಭಾಮಳ ಸಿಟ್ಟು ಹೆಚ್ಚಾಗುತ್ತದೆ. ಅವಳೆ ಕೃಷ್ಣನನ್ನು ಕರೆಯಲು ರುಕ್ಮಿಣಿಯ ಮನೆಗೆ ಬರುತ್ತಾಳೆ. ಕೃಷ್ಣರುಕ್ಮಿಣಿ ಪಗಡೆಯಾಟದಲ್ಲಿ ತಲ್ಲೀನರಾಗಿದ್ದ ಸಂದರ್ಭದಲ್ಲಿ ಸತ್ಯಭಾಮ ಬಂದು ಕೃಷ್ಣನನ್ನು ಮಾತಾಡಿಸುತ್ತಾಳೆ. ಅದಕ್ಕೆ ರುಕ್ಮಿಣಿ ಮಾತನಾಡಬಾರದು ಎಂದು ಆಜ್ಞೆ ಮಾಡುತ್ತಾಳೆ. ಪಗಡೆಯಾಟದಲ್ಲಿ ತಲ್ಲೀನಳಾಗಿದ್ದ ರುಕ್ಮಿಣಿ ಸತ್ಯಭಾಮರಿಗೆ ಮಾತಿಗೆ ಮಾತು ಬೆಳೆಯುತ್ತದೆ. ಸತ್ಯಭಾಮ, ಪಾರಿಜಾತ ಪುಷ್ಪವನ್ನು ಕೊಟ್ಟು ಹೋಗಿರಿ ಎಂದು ಕೃಷ್ಣನನ್ನು ತಡೆಯುತ್ತಾಳೆ. ಕೃಷ್ಣ ಏನು ಹೇಳದೇ ಹೊರಟು ಹೋಗುತ್ತಾನೆ. ಸತ್ಯಭಾಮ ದಿಕ್ಕುಕಾಣದೆ ಮೂರ್ಛೆ ಹೋಗುತ್ತಾಳೆ. ದೂತಿಯರು ಹೋಗಿ ಕೃಷ್ಣನನ್ನು ಕರೆದುಕೊಂಡು ಬರುತ್ತಾರೆ. ಕೃಷ್ಣ ಉಪಚಾರ ಮಾಡುತ್ತಾನೆ. ಸತ್ಯಭಾಮ ಎಚ್ಚರಗೊಂಡ ಪ್ರೀತಿಯಿಂದ ಸಮಾಧಾನ ಹೇಳುತ್ತಾನೆ. ಆದರೂ ಸತ್ಯಭಾಮ ನನಗೆ ಪುಷ್ಪ ಬೇಕೇಬೇಕೆಂದು ಹಠ ಹಿಡಿಯುತ್ತಾಳೆ. 'ಒಂದು ಚಿಕ್ಕ ಹೂವಿಗಾಗಿ ಇಷ್ಟೊಂದು ಚಿಂತೆ ಮಾಡುತ್ತೀಯಾ ನಾನು ನಿನಗೆ ಪಾರಿಜಾತ ವೃಕ್ಷವನ್ನೇ ತಂದುಕೊಡುತ್ತೇನೆ' ಎಂದು ಭಾಮಳಿಗೆ ವಚನ ನೀಡುತ್ತಾನೆ. ಸತ್ಯಭಾಮ ಕೃಷ್ಣನಿಂದ ವಚನ ಪಡೆದುಕೊಂಡು ಸಂತೋಷ ಪಡುತ್ತಾಳೆ. ನನ್ನ ಸವತಿ ಕೇವಲ ಒಂದು ಹೂವನ್ನು ಪಡೆದುಕೊಂಡಳು. ಹುಚ್ಚಿ ಅವಳು ನನ್ನ ಮನೆಯ ಅಂಗಳದಲ್ಲಿ ಪಾರಿಜಾತ ವೃಕ್ಷವೇ ಬರುತ್ತದೆ ಎಂದು ಭಾಮ ಗರ್ವದಿಂದ ಮೆರೆಯುತ್ತಾಳೆ.

ಸತ್ಯಭಾಮ ಕೃಷ್ಣನನ್ನು ಪಡೆಯುತ್ತಾನೆ ಎಂದು ಪ್ರಜ್ಞೆ ಮಾಡುತ್ತಾಳೆ. ಶಕ್ತಿಯನ್ನು ಪೂಜೆ ಮಾಡುತ್ತಾಳೆ. ಶಕ್ತಿ ಪ್ರಸನ್ನಳಾಗಿ, ಸತ್ಯಭಾಮಳಿಗೆ ಕೃಷ್ಣ ನಿನ್ನ ಮನೆಗೆ ಬರುವನು ಎಂಬ ಭರವಸೆ ನೀಡುತ್ತಾಳೆ. ಶಕ್ತಿಯ ಪೂಜೆಯ ಪರಿಣಾಮದಿಂದ ಶ್ರೀಕೃಷ್ಣನ ಮನಸ್ಸು ಬದಲಾವಣೆಯಾಗಿ ಭಾಮಳಿಗೆ ತೊಂದರೆಕೊಟ್ಟೆ ಎಂದು ಕೃಷ್ಣ ಪಶ್ಚಾತ್ತಾಪ ಪಡುತ್ತಾನೆ. ಕೃಷ್ಣ, ಸತ್ಯಭಾಮೆಯ ಮನಸ್ಸು ಅರಿಯಲು ಕೊರವಂಜಿಯ ವೇಷ ಹಾಕಿಕೊಳ್ಳುತ್ತಾನೆ.

ಕೃಷ್ಣನ ಕೊರವಂಜಿಯ ಪಾತ್ರ ಕೊನೆಯ ದೃಶ್ಯವಾಗಿರುತ್ತದೆ. ದೂತಿ ಕೊರವಂಜಿಯ ಪರಿಚಯ ಕೇಳುತ್ತಾಳೆ. ಕೊರವಂಜಿ ಕೈಯ ರೇಖೆಯನ್ನು ನೋಡಿ ಭವಿಷ್ಯ ಹೇಳುತ್ತಾಳೆ. ಮುಖ ನೋಡಿ ಮನಸ್ಸಲ್ಲಿ ಇರುವುದನ್ನು, ಇದ್ದಹಾಗೆ ಹೇಳುತ್ತೇನೆ. ಕೇಳಿ ನಿಮಗೆ ದೈವದತ್ತವಾಗಿ ಭವಿಷ್ಯಜ್ಞಾನ ಬಂದಿರುವುದು ಎಂಬುದಾಗಿ ತಿಳಿಸುತ್ತಾಳೆ. ಸತ್ಯಭಾಮೆಯ ಮನೆಗೆ ಕೊರವಂಜಿ ಕಣಿ ಹೇಳಲು ಬರುತ್ತಾಳೆ. ಸತ್ಯಭಾಮ ಕೊರವಂಜಿಯನ್ನು ಕಣೀ ಹೇಳುವಂತೆ ಕೇಳುತ್ತಾಳೆ. ಕೊರವಂಜಿ "ಶ್ರೀಕೃಷ್ಣನು ನಿನ್ನ ಮನೆಗೆ ಬರುತ್ತಾನೆ" ಎಂದು ಭರವಸೆ ನೀಡುತ್ತಾಳೆ. ಅದಕ್ಕೆ ಕೊರವಂಜಿ ಸತ್ಯಭಾಮೆಯ ಮುತ್ತಿನಹಾರವನ್ನು ಬೇಡುತ್ತಾಳೆ. ಭಾಮ ಕೊಡಲು ಒಪ್ಪುತ್ತಾಳೆ. ಕೊರವಂಜಿಗೆ ಊಟ ಮಾಡಲು ಭಾಮ ಹೇಳುತ್ತಾಳೆ. ಅದಕ್ಕೆ ಕೊರವಂಜಿ ಪಾದಪೂಜೆಯಾಗಬೇಕು ನಂತರ ಊಟ ಮಾಡುವುದಾಗಿ ಹೇಳುತ್ತಾಳೆ. ಸತ್ಯಭಾಮ ಸಂಕೋಚ ಪಡುತ್ತಾಳೆ. ಧೂತಿಯ ಒತ್ತಾಯ ಮಾಡುತ್ತಾಳೆ. ಕೊರವಂಜಿಯ ಪಾದ ತೊಳೆಯುವಾಗ ಶ್ರೀಕೃಷ್ಣನು ಪಾದಗಳಾಗಿ ಕಾಣುತ್ತವೆ. ದೂತಿ ಅದೇ ರೀತಿ ಎಷ್ಟು ಜನರ ಹೋಲಿಕೆ ಇರುವುದಿಲ್ಲ ಎಂದು ಹೇಳುತ್ತಾಳೆ. ನಂತರ ಕೊನೆಯ ದೃಶ್ಯದಲ್ಲಿ ಶ್ರೀಕೃಷ್ಣ ಪ್ರವೇಶ ಮಾಡುತ್ತಾನೆ. ಶ್ರೀಕೃಷ್ಣ ಸತ್ಯಭಾಮೆಯ ಮನೆಗೆ ಬರುತ್ತಾನೆ. ಸತ್ಯಭಾಮ ಮನೆ ಬಾಗಿಲು ಹಾಕಿಕೊಳ್ಳುತ್ತಾಳೆ. ಕೃಷ್ಣ ಬಾಗಿಲು ತಟ್ಟುತ್ತಾನೆ. ಸತ್ಯಭಾಮ ತೆಗೆಯುವುದಿಲ್ಲ. ಕೃಷ್ಣನು ತನ್ನ ದಶಾವತಾರಗಳನ್ನು ಹೇಳುತ್ತಾನೆ. ಅದಕ್ಕೆ ಅವಳು ಬಾಗಿಲು ತೆಗೆಯುವುದಿಲ್ಲ. ಕೃಷ್ಣನು ಹೊರಡುತ್ತಾನೆ. ನಂತರ ಸತ್ಯಭಾಮ ಬಾಗಿಲು ತೆರೆಯುತ್ತಾಳೆ. ಕೃಷ್ಣನು ಇಲ್ಲದಿರುವುದನ್ನು ನೋಡಿ ಅವಳಿಗೆ ತನ್ನ ತಪ್ಪಿನ ಅರಿವಾಗುತ್ತದೆ. ದೂತಿ ಕೃಷ್ಣ ಇರುವಲ್ಲಿಗೆ ಸತ್ಯಭಾಮಳನ್ನು ಕರೆದುಕೊಂಡು ಬರುತ್ತಾಳೆ.

ಆಗ ಭಾಮ ಕೃಷ್ಣನನ್ನು ಕ್ಷಮೆ ಕೇಳುತ್ತಾಳೆ. ಅಹಂಕಾರದಿಂದ ಅಂಧಳಾಗಿದ್ದೆ. ನನ್ನನ್ನು ಕ್ಷಮಿಸಿ ಎಂದು ಬೇಡಿಕೊಳ್ಳುತ್ತಾಳೆ. ಕೃಷ್ಣ ಮನ್ನಿಸುತ್ತಾನೆ. ಸತ್ಯಭಾಮೆಗೆ ಕೊಟ್ಟಿದ್ದ ಹಾರವನ್ನು ಹೇಗಾದರೂ ಮಾಡಿ ಹಿಂದಕ್ಕೆ ಪಡೆಯುತ್ತಾನೆ, ಎನ್ನುವ ಶಪಥ ನೆರವೇರಿಸಲು ಕೊರವಂಜಿಯ ವೇಷ ಧರಿಸುತ್ತಾನೆ. ಸತ್ಯಭಾಮೆಯ ಶಪಥ, ಕೃಷ್ಣನ ಹಾರವನ್ನು ಪಡೆಯಬೇಕೆಂಬ ಶಪಥ ಇಬ್ಬರ ಇಚ್ಛೆಗಳು ಕೈಗೂಡುತ್ತವೆ.

ಎಲ್ಲರೂ ಮಂದಿರಕ್ಕೆ ಬರುತ್ತಾರೆ. ಶ್ರೀಕೃಷ್ಣ ಸತ್ಯಭಾಮ ಸಮಾಗಮದೊಂದಿಗೆ ಶ್ರೀಕೃಷ್ಣ ಪಾರಿಜಾತ ನಾಟಕಕ್ಕೆ ಮಂಗಳವಾಗುತ್ತದೆ."[೧೨]

ಕುಲಗೋಡ ತಮ್ಮಣ್ಣನ ಈ ಕೃತಿ ಜನಮೆಚ್ಚುಗೆಯನ್ನು ಪಡೆದುಕೊಂಡಿತು. ಕುಲಗೋಡ ತಮ್ಮಣ್ಣನ ಕೃತಿಯು ಆಧ್ಯಾತ್ಮಿಕ, ಭಕ್ತಿ, ಹಾಸ್ಯ, ವಿಶೇಷವಾಗಿ ಸಂಗೀತವನ್ನು ಒಳಗೊಂಡಿತು. ಇದರಿಂದಾಗಿ ಇದು ಒಂದು ರಸಬದ್ಧ ಶೃಂಗಾರ ಕಾವ್ಯವಾಯಿತು ಎಂದು ಹೇಳಬಹುದು. ಪಾರಿಜಾತದಲ್ಲಿ ಬರುವ ಪ್ರತಿಯೊಂದು ಪಾತ್ರದಲ್ಲೂ ತಮ್ಮನನ್ನು ಪ್ರೇಕ್ಷಕರು ಗುರುತಿಸಿಕೊಳ್ಳಲಾರಂಭಿಸಿದ್ದರಿಂದ ಅದು ಇನ್ನೂ ಜನಪ್ರಿಯವಾಯ್ತು. ಸಾಮಾನ್ಯ ಜನರು ಪಾರಿಜಾತದಲ್ಲಿ ತಮ್ಮ ಬದುಕನ್ನು ಕಂಡುಕೊಳ್ಳುತ್ತಿದ್ದರು. ಅದು ಕೇವಲ ನಾಟಕವಾಗಿ ಮಾತ್ರವಲ್ಲದೆ ಜನ ಜೀವನದ ಒಂದು ಭಾಗವಾಗಿಯೇ ಪರಿಗಣಿತವಾಗಿದೆ. ಹಾಗಾಗಿ ಕುಲಗೋಡ ತಮ್ಮಣ್ಣನ ಕೃತಿ ಜನಪ್ರಿಯವಾಗಲು ಕಾರಣವಾಯಿತು.

ಕುಲಗೋಡ ತಮ್ಮಣ್ಣನ ಕೃತಿಯಲ್ಲಿ ಮುಖ್ಯವಾಗಿ ಗಮನಿಸಿದ ವಿಷಯವೆಂದರೆ, ಪಾರಿಜಾತ ನಾಟಕದಲ್ಲಿ ಪಾರಿಜಾತ ಪುಷ್ಪವನ್ನು ಶ್ರೀಕೃಷ್ಣನು ಸತ್ಯಭಾಮಗೆ ತಂದುಕೊಡುವಲ್ಲಿಗೆ ಪಾರಿಜಾತ ನಾಟಕ ಮುಕ್ತಾಯವಾಗುತ್ತದೆ. ಆದರೆ ಕುಲಗೋಡ ತಮ್ಮಣ್ಣನ ಶ್ರೀಕೃಷ್ಣ ಪಾರಿಜಾತದ ಕೊನೆಯಲ್ಲಿ ಪಾರಿಜಾತ ಪುಷ್ಪದ ವಿಷಯವೇ ಬರುವುದಿಲ್ಲ. ಸತ್ಯಭಾಮ ಕೃಷ್ಣರ ಸಂಗಮದೊಂದಿಗೆ ಶ್ರೀಕೃಷ್ಣ ಪಾರಿಜಾತ ಆಟ ಮುಕ್ತಾಯವಾಗುತ್ತದೆ.

ಕುಲಗೋಡು ತಮ್ಮಣ್ಣನ ಮರಣದ ನಂತರ ಪಾರಿಜಾತ ನಾಟಕ ಬೆಳೆಸಿಕೊಂಡು ಬಂದವಳು ಕೌಜಲಗಿ ನಿಂಗಮ್ಮ. ಕುಲಗೋಡು ತಮ್ಮಣ್ಣನ ಕೈಯಲ್ಲಿ ಕಲಿತ ಕಲಾವಿದೆ ಕೌಜಲಗಿ ನಿಂಗಮ್ಮ.

### ೧.೩. ಕೌಜಲಗಿ ನಿಂಗಮ್ಮನ ಕಾಲಘಟ್ಟ

ಕುಲಗೋಡ ತಮ್ಮಣ್ಣನ ನಂತರ ಶ್ರೀಕೃಷ್ಣ ಪಾರಿಜಾತವನ್ನು ಬೆಳೆಸಿಕೊಂಡು ಬಂದ ಕೀರ್ತಿ ನಿಂಗಮ್ಮಗೆ ಸೇರುತ್ತದೆ. "ಕೌಜಲಗಿ ನಿಂಗಮ್ಮ ಪಾರಿಜಾತಕ್ಕೆ ಸು. ೧೮೭೦ರಲ್ಲಿ ಪ್ರವೇಶ ಮಾಡಿದಳು."[೧೩] ಉತ್ತರ ಕರ್ನಾಟಕದಲ್ಲಿ ಇಂದಿಗೂ ಶ್ರೀಕೃಷ್ಣ ಪಾರಿಜಾತ ಆಟ ಎಂದು ಯಾರೂ ಹೇಳುವುದಿಲ್ಲ. 'ನಿಂಗಮ್ಮನ ಪಾರಿಜಾತ' ಎಂದೇ ಕರೆಯುತ್ತಾರೆ. ಕುಲಗೋಡ ತಮ್ಮಣ್ಣನ ಮೇಳದಲ್ಲಿ ನುರಿತ ನಟಿಯಾದ "ಕೌಜಲಗಿ ನಿಂಗಮ್ಮ ಮುಂದೆ ತನ್ನದೇ ಆದ ಆಟದ ಮೇಳ ಸ್ಥಾಪಿಸಿದಳು."[೧೪] ಕುಲಗೋಡು ತಮ್ಮಣ್ಣ ಮರಣದ ನಂತರ, ನಿಂಗಮ್ಮ ಧೈರ್ಯದಿಂದ ಮುನ್ನುಗ್ಗಿ ಕಂಪನಿಯ ಮಾಲಿಕತ್ವವನ್ನು ವಹಿಸಿಕೊಂಡಳು. ನಿಂಗಮ್ಮ ತುಂಬ ಶ್ರದ್ಧೆಯುಳ್ಳವಳಾಗಿದ್ದಳು ಹಾಗೂ ವಾಕ್‌ಚಾತುರ್ಯವುಳ್ಳವಳಾಗಿದ್ದಳು.

ಶ್ರೀಕೃಷ್ಣ ಪಾರಿಜಾತ ನಾಟಕದಲ್ಲಿ ಮೂರುದಿನ ಮೂರು ಪಾತ್ರಗಳಲ್ಲಿ ಕಾಣಿಸಿಕೊಂಡು ಆಟವಾಡುವ ಸಾಮರ್ಥ್ಯ ಹೊಂದಿದದ್ದಳು ನಿಂಗಮ್ಮ. ಮುಖ್ಯವಾಗಿ ಆಕೆ ಮೂರು ಪಾತ್ರಗಳನ್ನು ವಹಿಸುತ್ತಿದ್ದಳು.

ಮೊದಲ ದಿನ ಗೊಲ್ಲತಿ ರುಕ್ಮಿಣಿ ಸನ್ನಿವೇಶ, ಎರಡನೇ ದಿನ ಸತ್ಯಭಾಮ ಕೃಷ್ಣ ನಾರದ, ಮೂರನೇ ದಿನ ಕೊರವಂಜಿ ಕೃಷ್ಣ. ಈ ನಾಟಕವನ್ನು ಮೂರುದಿನ ಆಡಿದರೂ, ಒಂದೊಂದು ಭಾಗವು ವಿಶೇಷ ರೀತಿಯಲ್ಲಿ ಕಂಡುಬರುತ್ತಿತ್ತು. ನಿಂಗಮ್ಮ ಸಂಗೀತದಲ್ಲಿ ವಿಶೇಷ ಪರಿಣಿತಿಯನ್ನು ಹೊಂದಿದ್ದಳು. ಭಾವನಾತ್ಮಕವಾಗಿ ಹಾಡುತ್ತಿದ್ದಳು. ತನ್ನ ಸಂಗೀತ ಗಾನದಿಂದ ಪ್ರೇಕ್ಷಕರ ಮನಸ್ಸನ್ನು ತನ್ನ ಕಡೆ ಸೆಳೆದುಕೊಳ್ಳುವ ಶಕ್ತಿಯನ್ನು ಹೊಂದಿದಳು. "ನಿಂಗಮ್ಮ ಕರ್ನಾಟಕ ಸಂಗೀತ ಮತ್ತು ಹಿಂದೂಸ್ತಾನಿ ಸಂಗೀತವೇ ಎರಡು ಪೋಷಣೆ ಮಾಡಿದವಳು."[೧೫] "ಬರಗಿ ರಾಚಯ್ಯ, ಕೌಟಕೊಪ್ರ ರಾಮಣ್ಣ, ಚೌಡರ ಈರಪ್ಪ ಟಕ್ಕಳರ ವಿಠ್ಠಲ ಮುಂತಾದ ಕಲಾವಿದರಲ್ಲಿ ರಾಮಣ್ಣ ಸೇರ್ಪಡಿಸಿದ ಸಂಗೀತದ ತೆಕ್ಕೆಗೆ ಸಿಲುಕಿಕೊಂಡಳು. ಹೀಗಾಗಿ ಇವರೆಲ್ಲ ಕರ್ನಾಟಕ ಸಂಗೀತದಿಂದ ದೂರವೇ ಉಳಿದರು. ಪ್ರೇಕ್ಷಕರು ಕೂಡ ಈ ಹೊಸರುಚಿಗೆ ಸಂಪೂರ್ಣವಾಗಿ ಬಗ್ಗಿಕೊಂಡಿದ್ದರಿಂದ ಹಿಂದುಸ್ಥಾನಿ ಸಂಗೀತಕ್ಕೆ ಹೊಂದಿಕೊಂಡರು. ಅದನ್ನೇ ಆರಾಧಿಸ ತೊಡಗಿದರು. ಶುದ್ಧ ಕರ್ನಾಟಕ ಸಂಗೀತದಲ್ಲಿಯೇ ಹಾಡುತಿದ್ದ ನಿಂಗಮ್ಮ ತಾನು ನೋಡು ನೋಡುತ್ತಿರುವಂತೆಯೇ ತನ್ನೆದುರು ತನ್ನ ಕಂಪನಿಯಲ್ಲಿಯೇ ಈ ಸ್ಥಿತ್ಯಂತರವನ್ನು ಕಾಣುವಂತಾಯಿತು."[೧೬]

ನಿಂಗಮ್ಮನ ಸಂಬಂಧಿ ಬಿ.ಎಂ. ಕೌಜಲಗಿ ಹೇಳುತ್ತಾರೆ. "ನಿಂಗಮ್ಮ ಪಾರಿಜಾತ ಆಡುವುದು ಭಕ್ತಿಪೂರ್ವಕವಾಗಿತ್ತು. ನಿಂಗವ್ವ ಹನುಮಂತ ದೇವರ ಓಕುಳಿಯ ದಿನ ಪ್ರತಿವರ್ಷ ತನ್ನ ಹುಟ್ಟೂರು ಕೌಜಲಿಗಿಗೆ ಬಂದು ಪಾರಿಜಾತ ಆಡುತ್ತಿದ್ದಳು."[೧೭] ಪಾರಿಜಾತ ನಾಟಕದ ಪ್ರಾರಂಭದ ಕಾಲದಲ್ಲಿ ಕೃಷ್ಣನ ಪಾತ್ರದ ಬಗ್ಗೆ ಗಮನ ಹರಿಸಿರಲಿಲ್ಲ. "ಕೌಜಲಗಿ ನಿಂಗಮ್ಮನ ಕಂಪನಿಯ ನಣದಿ ರಾಮಣ್ಣ ಸೇರುವುದಕ್ಕೆ ಮುಂಚಿನ ದಿನಗಳಲ್ಲಾಗಲಿ ಕೃಷ್ಣ ಪಾತ್ರಕ್ಕೆ ಸಂಭಾಷಣೆಯ ಕಳೆಯಿರಲಿಲ್ಲ. ಆಟದ ತುಂಬ ಆಕ್ರಮಿಸಿಕೊಳ್ಳುತ್ತಿದ್ದವರು ಸತ್ಯಭಾಮ ಮತ್ತು ರುಕ್ಮಿಣಿಯರು. ಒಬ್ಬ ಸಣ್ಣ ಹುಡುಗನನ್ನು ಇವರಿಬ್ಬರ ಮಧ್ಯದಲ್ಲಿ ನಿಲ್ಲಿಸಲಾಗುತ್ತಿತ್ತು. ಇವನ ಕೊರಳಿಗೊಂದು ದಡಿಧೋತ್ರವಿರುತ್ತಿತ್ತು. ಅವನಿಗೆ ಯಾವ ಹಾಡು ಸಂಭಾಷಣೆ ಬರಬೇಕೆಂಬ ನಿಯಮವಿರಲಿಲ್ಲ. ಕೇವಲ ಸತ್ಯಭಾಮೆ ರುಕ್ಮಿಣಿಯರ ಸಂಭಾಷಣೆ ಕೇಳುವವನಾಗಿದ್ದ. ಬಹಳವಾದರೆ ಒಬ್ಬೊಬ್ಬರ ಮಾತು ಮುಗಿದ ಮೇಲೆ ಇನ್ನು "ನೀನು ಹೇಳು ರುಕ್ಮಿಣಿ, ಇನ್ನು ನೀನು ಹೇಳು ಸತ್ಯಭಾಮ ಎನ್ನುವವನಾಗಿದ್ದ ಅಪರಾಳ ಪಾರಿಜಾತ ಕಾವ್ಯವನ್ನು ಅರ್ಥೈಸಿಕೊಂಡಿದ್ದ ನಣದಿ ರಾಮಣ್ಣ ವಿಚಾರ ಮಾಡಿದನು. ಕೃಷ್ಣ ಪಾತ್ರ ಇಷ್ಟು ಸಪ್ಪೆಯಾಗಬೇಕೆ? ಎಂದು ಮುಂದೆ ಈ ಪಾತ್ರಕ್ಕೆ ಹಾಡು ಸಂಭಾಷಣೆಗಳನ್ನು ಹೊಂದಿಸಿ ಗಂಭೀರ ಸ್ವರೂಪ ಕೊಟ್ಟು

ಬೆಳೆಸಿದವನು ನಣದಿ ರಾಮಣ್ಣ. ಈ ಪ್ರಯೋಗಶೀಲತೆ ನಡೆದದ್ದು ನಿಂಗಮ್ಮನ ಕಂಪನಿಯಲ್ಲಿ. ಇದಕ್ಕೆ ಕೌಜಲಗಿ ನಿಂಗಮ್ಮನ ಅನುಮತಿಯ ಮುದ್ರೆಯಿತ್ತು ಎಂಬುದನ್ನು ಬಿಡಿಸಿ ಹೇಳಬೇಕಾಗಿಲ್ಲ. ನಿಂಗಮ್ಮನ ಕಂಪನಿಯಲ್ಲಿ ರಾಮಣ್ಣ ಕೃಷ್ಣನ ಪಾತ್ರ ಮಾಡುತ್ತಿರುವಾಗ ಈ ಪಾತ್ರದ ವಿಷಯದಲ್ಲಿ ಅವರು ತೋರಿದ ಪ್ರಯೋಗಶೀಲತೆಯನ್ನು ಬಹಳಷ್ಟು ಜನ ಮೆಚ್ಚಿದ್ದಾರೆ. ಸಂಗಡವೇ ನಿಂಗಮ್ಮ ಅವರಿಗೆ ಕೊಟ್ಟು ಪ್ರೋತ್ಸಾಹವನ್ನು ನೆನೆಯುತ್ತಾರೆ."[೧೮]

ಶ್ರೀಕೃಷ್ಣನ ಸಂಭಾಷಣೆ ತುಂಬ ಜನಪ್ರಿಯ ಪಡೆದುಕೊಂಡಿತು. ಬದಲಾದ ಕಾಲಕ್ಕೆ ನಿಂಗಮ್ಮ ಹೊಂದಿಕೊಳ್ಳುತ್ತಿದ್ದಳು. "ನಿಂಗಮ್ಮ ಕಂಪನಿಯ ಪ್ರಾರಂಭ ಕಾಲದಿಂದ ಹಾರ್ಮೋನಿಯಂ ಇರಲಿಲ್ಲವಂತೆ ನೀರಿನಲ್ಲಿ ನವಿಲುಗರಿ ಇಟ್ಟು ಎಳೆದು ಧ್ವನಿ ಹೊರಡಿಸುವ ವಿವರಣೆಯೊಂದು ಸಂಗೀತಕ್ಕೆ ಆಧಾರವಾಗಿ ಜೋಡಿಸಲಾಗುತ್ತಿತ್ತು. ಗಲುಗಿನಿಂದ ಮಾಡಿದ ಉಪಕರಣವೂ ಹೀಗೆಯೇ ಸ್ವಯಂಕ್ಕೆ ಆಧಾರವಾಗಿರುತ್ತಿತ್ತು. ತರುವಾಯ ಪಿಟೀಲು ಬಂತು, ಆಮೇಲೆಯೇ ಹಾರ್ಮೋನಿಯಂ ಪ್ರವೇಶ ಮಾಡಿತು."[೧೯]

ನಿಂಗಮ್ಮ ಸು. ೬೦-೬೫ ವರ್ಷಗಳ ಕಾಲ ರಂಗಸೇವೆ ಮಾಡಿದ್ದಾಳೆ. ಅಪೂರ್ವವಾದ ಸಾಧನೆಗೈದವಳು ನಿಂಗಮ್ಮ, ತನ್ನ ಬದುಕನ್ನು ರಂಗಭೂಮಿಯಲ್ಲಿ ಕಂಡುಕೊಂಡಳು. ಬ್ರಹ್ಮಚಾರಿಯಾಗಿ, ತನಗಾಗಿ ಯಾವ ಆಸ್ತಿ ಹಣ ಮಾಡಿಕೊಳ್ಳದೆ, ಕಲೆ ಹಾಗೂ ಕಲಾವಿದಳಾಗಿದ್ದಾಳೆ. ದುಡಿದ ಈಕೆ ಕಲಾ ಆರಾಧಕಳಾಗಿದ್ದಳು. ಇವಳನ್ನು ಜನ "ಪಾರಿಜಾತದ ಕಲಾಸಿರಿ" ಎಂದು ಹಾಗೂ "ಪಾರಿಜಾತದ ಕಲಾದೇವತೆ" ಎಂದು ಕರೆಯುತ್ತಾರೆ. ಇಂದಿಗೂ ಉತ್ತರ ಕರ್ನಾಟಕದಲ್ಲಿ ನಿಂಗಮ್ಮನ ಮನೆ ಮಾತಾಗಿದ್ದಾಳು. ನಿಂಗಮ್ಮ ಪಾರಿಜಾತಕ್ಕೆ ಹೊನ್ನ ಕಳಸವಾಗಿದ್ದಾಳೆ.

## ಆ. ನಟಿಯಾಗಿ ಕೌಜಲಗಿ ನಿಂಗಮ್ಮ

### ೧. ಕೌಜಲಗಿ ನಿಂಗಮ್ಮನ ಅಭಿನಯ

ಉತ್ತರ ಕರ್ನಾಟಕದ ರಂಗಭೂಮಿಯ ಹಿರಿಯ ಕಲಾವಿದೆ ಕೌಜಲಗಿ ನಿಂಗಮ್ಮ. "ಜಯಲಾಟ ರಂಗಭೂಮಿಯ ಮೊಟ್ಟಮೊದಲು ರಂಗನಟಿಯಾಗಿದ್ದಾಳೆ."[೨೦] ಉತ್ತರ ಕರ್ನಾಟಕದಲ್ಲಿ ಶ್ರೀಕೃಷ್ಣ ಪಾರಿಜಾತದ ಅಂದರೆ 'ನಿಂಗಮ್ಮ ಪಾರಿಜಾತ' ಅಥವಾ 'ನಿಂಗಮ್ಮನ ಆಟ' ಎಂದೇ ಕರೆಯುತ್ತಾರೆ. ನಿಂಗಮ್ಮನ ಹೆಸರು ರಂಗಭೂಮಿಯಲ್ಲಿ ಚಿರಸ್ಮರಣೀಯವಾಗಿದೆ. ಕೌಜಲಗಿ ನಿಂಗಮ್ಮ ಇಲ್ಲವಾಗಿ ಸುಮಾರು ವರ್ಷಗಳಾದರೂ ಅವಳ ಅಭಿನಯವನ್ನು ಜನ ಇನ್ನೂ ಮರೆತಿಲ್ಲ. ಅವಳ ಅಭಿನಯವನ್ನು ನೋಡಿದ ಜನ ಹೇಳುತ್ತಾರೆ. 'ನಿಂಗಮ್ಮಳಂತ ಕಲಾವಿದೆ ಹುಟ್ಟುವುದಿಲ್ಲ, ಅವಳ ಹಾಗೆ ಯಾರೂ ಇದುವರೆಗೂ ಅಭಿನಯ ಮಾಡಿಲ್ಲ.'

“ನಿಂಗಮ್ಮನ ಸಂಬಂಧಿ ಬಿ.ಎಂ. ಕೌಜಲಗಿ ಹೀಗೆ ಹೇಳುತ್ತಾರೆ. ನನಗೆ ಏಳು-ಎಂಟು ವರ್ಷ ವಯಸ್ಸು ಆಗಿತ್ತು, ೧೯೪೨ರಲ್ಲಿ ನಿಂಗಮ್ಮನನ್ನು ನೋಡಿದ್ದೆ. ಕೊರವಂಜಿ ಪಾತ್ರದಲ್ಲಿ ಆಕೆ ನಟಸುತ್ತಿದ್ದಳು. ನಿಂಗಮ್ಮನ ಧ್ವನಿ ಗಡುಸಾಗಿತ್ತು. ಮೈಕು ಇಲ್ಲದೆ ಸುಮಾರು ಎರಡು ಕಿ.ಮೀ. ದೂರಕ್ಕೆ ಆಕೆಯ ಹಾಡುಗಾರಿಕೆಯನ್ನು ಕೇಳಬಹುದಿತ್ತು. ಎತ್ತರದ ಧ್ವನಿಯಲ್ಲಿ ಆಕೆ ಹಾಡುತ್ತಿದ್ದಳು. ಹಾಡುಹೇಳುತ್ತಾ, ನೃತ್ಯ ಮಾಡುತ್ತಿದ್ದಳು. ಅವಳ ಹಾವಭಾವ ನೋಡುವುದಕ್ಕೆ ಎರಡು ಕಣ್ಣು ಸಾಲದು ಎಂದು ಹೇಳುತ್ತಾರೆ. ಇವಳ ಅಭಿನಯಕ್ಕೆ ಮೆಚ್ಚಿ ಕೌಜಲಗಿಯ ಬಿ.ಜಿ. ದೇಸಾಯಿರವರು ಬಹುಮಾನವಾಗಿ ಹೊಲವನ್ನು ನಿಂಗಮ್ಮ ಕೊಟ್ಟಿದ್ದಾರೆ.”[೨೧]

“ಹನುಮಂತ ದೇವರ ಗುಡಿಪೂಜಾರಿ, ರಾಮಪ್ಪ, ನಿಂಗಮ್ಮನನ್ನು ನೋಡಿದಾಗ ನನಗೆ ೧೫ ವರ್ಷ ವಯಸ್ಸಾಗಿತ್ತು. ಪಾರಿಜಾತ ಆಟ ಅಂದರೆ ಆಟ. ದೊರಸಾನಿ ಪಾತ್ರ, ಕೊರವಂಜಿ ಪಾತ್ರ, ಸತ್ಯಭಾಮ ಪಾತ್ರ ನೋಡಿ, ನಿಂಗಮ್ಮ ರಂಗ ಪ್ರವೇಶ ಮಾಡುವಾಗ ಕುಣಿಯುತ್ತ ಬರುತ್ತಿದ್ದಳು. ಹಾರ್ಮೋನಿಯಂ ಮಾಸ್ಟರ್, ತಬಲ ಮಾಸ್ಟರ್‌ರಿಗೆ ಕೈಸನ್ನೆಯ ಮಾಡುತ್ತಲೇ ನಾಟ್ಯ ಮಾಡುತ್ತಿದ್ದಳು. ಆಟದಲ್ಲಿ ತುಂಬ ಶ್ರದ್ಧೆವುಳ್ಳವಳಾಗಿದ್ದಳು. ಕೌಜಲಗಿ ನಿಂಗಮ್ಮ ಆಟ ಆಡುವಾಗ ತಲೆ ಮೇಲೆ ಸಮೇವನ್ನು ಇಟ್ಟುಕೊಂಡು ನೃತ್ಯ ಮಾಡುತ್ತಿದ್ದಳು. ನಿಂಗಮ್ಮವನ್ನು ನೋಡಿದ ಜನ ಹೇಳುತ್ತಾರೆ.”[೨೨] ಆಕೆನೃತ್ಯ ಮಾಡುತ್ತಿದ್ದಾಗ ಸಮೇಯ ಜಾರುತ್ತಿರಲಿಲ್ಲವಂತೆ. ಹಾಗೆ ಇಟ್ಟುಕೊಂಡು ಮೂರು ದಿನ ನೃತ್ಯ ಮಾಡುತ್ತಿದ್ದಳು. ನಿಂಗಮ್ಮನ ಅಭಿನಯಕ್ಕೆ ಅಪಾರಗೌರವ ಇದೆ. ನಿಂಗಮ್ಮ ಆಟಕ್ಕೆ ಬೇರೆ ಊರುಗಳಿಗೆ ಹೋದಾಗ ಮೇಳ ಭಜಂತ್ರಿ ಜೊತೆ ಸ್ವಾಗತ ಮಾಡಿಕೊಳ್ಳುತ್ತಿದ್ದರಂತೆ. ನಿಂಗಮ್ಮ ಕುದುರೆ ಮೇಲೆ ಆಟಕ್ಕೆ ಬರುತ್ತಿದ್ದಳಂತೆ.

ನಿಂಗಮ್ಮ ಮೂರು ದಿನ ನಾಟಕ ಮಾಡಿದರೂ ಬೇಜಾರು ಆಗುತ್ತಿರಲಿಲ್ಲ. ಜನರು ಕಿಕ್ಕಿರಿದು ನೋಡುತ್ತಿದ್ದರು. ಶ್ರದ್ಧಾಭಕ್ತಿಗಳಿಂದ, ಆಸಕ್ತಿಯಿಂದ ಜನ ನಾಟಕ ನೋಡುವುದರಲ್ಲಿ ತಲ್ಲೀನರಾಗುತ್ತಿದ್ದರು. ಅವಳು ಅತ್ಯಂತ ಸುಂದರಿ ಸ್ತ್ರೀ ಆಗಿರಲಿಲ್ಲ. ಅದರೂ ಅವಳು ಸತ್ಯಭಾಮ, ಕೊರವಂಜಿ ಪಾತ್ರ ಧರಿಸಿಕೊಂಡಳೆಂದರೆ ಸಾಕ್ಷಾತ್ ದೇವರಕನ್ಯೆ ಹಾಗೆ ಕಂಡುಬರುತ್ತಿದ್ದಳು. ನಿಂಗಮ್ಮನ ಕಾಲದಲ್ಲಿ ಹೆಣ್ಣುಮಕ್ಕಳು ಹೊರಗಡೆ ಬರುತ್ತಿರಲಿಲ್ಲ. ನಿಂಗಮ್ಮ ರಂಗಭೂಮಿಗೆ ಬಂದ ನಂತರ ಅವಳನ್ನು ನೋಡವುದು ಒಂದು ಭಾಗ್ಯವಾಗಿತ್ತು. ಅಂತಹದರಲ್ಲಿ ಹೆಣ್ಣುಮಕ್ಕಳು, ಮನೆ ಬಿಟ್ಟು ಹೊರಗಡೆ ಇವಳನ್ನು ನೋಡುವುದಿಕ್ಕೆ ಬಂದರು.

ಕೌಜಲಗಿ ನಿಂಗಮ್ಮ ಕಲಾತಪಸ್ವಿಯಾಗಿದ್ದಳು. ನಿಂಗಮ್ಮ ತನ್ನ ಜೀವನವನ್ನು ಪಾರಿಜಾತದ ರಂಗಸೇವೆಯಲ್ಲೇ ಕಳೆದಳು. ನಿಂಗಮ್ಮ ಸುಮಾರು ತನ್ನ ೧೩ ವಯಸ್ಸುನಿಂದ ೮೫ ಇಳಿ ವಯಸ್ಸಿನವರೆಗೂ

ಕಲಾಸೇವೆ ಮಾಡಿದಳು. ಕನ್ನಡ ರಂಗಭೂಮಿಯ ಹಿರಿಯ ಕಲಾವಿದೆಯಾಗಿದ್ದಾಳೆ. ನಿಂಗಮ್ಮ ಪಾರಿಜಾತ ಆಟಕ್ಕೆ ಜೀವಕಳೆ ತುಂಬಿದವಳು. "ನಿಂಗಮ್ಮ ಸತ್ಯಭಾಮೆಯ ಪಾತ್ರದಲ್ಲಿ ಆಕೆಯ ಅಪೂರ್ವ ಅಭಿನಯವನ್ನು ನೋಡಿದ ವಿಷ್ಣು ಭಕ್ತರು ಆಕೆಗೆ ಅಡ್ಡ ಬೀಳುತ್ತಿದ್ದರಂತೆ."[೨೩]

### ೩. ನಿಂಗಮ್ಮನ ನಾಟಕ ಕಂಪನಿ

#### ೧. ಸಂಘಟನಾ ಚತುರೆ ಕೌಜಲಗಿ ನಿಂಗಮ್ಮ

ಕೌಜಲಗಿ ನಿಂಗಮ್ಮ ಕುಲಗೋಡು ತಮ್ಮಣ್ಣನ ಗರಡಿಯಲ್ಲಿ ತಯಾರಾದವಳು. ನುರಿತ ನಟಿಯಾಗಿದ್ದಳು. ಅವಳಿಗೆ ಪಾರಿಜಾತದ ಕಥೆ, ಸಂಗೀತ ಹಾಗೂ ಸ್ಪಷ್ಟ ಆಕಾರ ಕೊಡುವ ಸಂಭಾಷಣೆಯನ್ನು ಬರೆಸಿದಳು. ಪಾತ್ರಗಳ ಸನ್ನಿವೇಶಕ್ಕೆ ತಕ್ಕಂತೆ ಹಾಡುಗಳನ್ನು ಜೋಡಣೆ ಮಾಡಿದಳು. ಸ್ವತಃ ಆಟದ ಕಂಪನಿಯನ್ನು ಕಟ್ಟಿದಳು. ಪುರುಷ ಪ್ರಧಾನ ಸಮಾಜದಲ್ಲಿ ಒಬ್ಬ ಸ್ತ್ರೀ ಒಂದು ಕಂಪನಿಯನ್ನು ಕಟ್ಟುವುದೆಂದರೆ, ಸಾಮಾನ್ಯ ಸಂಗತಿಯಲ್ಲ. ಅದೊಂದು ದೊಡ್ಡ ಸಾಹಸವೇ ಸರಿ. ನಿಂಗಮ್ಮ ಕಂಪನಿಯನ್ನು ಬೆಳೆಸಿಕೊಂಡು ಹೋಗುವ ಜವಾಬ್ದಾರಿಯನ್ನು ತಾನೇ ವಹಿಸಿಕೊಂಡಳು. ದಿನಕ್ಕೊಂದು ಊರು, ದಿನಕ್ಕೊಂದು ಒಲೆ, ಊರುಗಳನ್ನು ಅಲೆಯುತ್ತಾ, ಹೊಸ ಹೊಸ ಜನರ ಮಧ್ಯೆ ಬದುಕುವುದು ತುಂಬ ಕಷ್ಟದ ಕೆಲಸ. ಇವುಗಳಿಗೆ ತಲೆಕೊಡದೆ ಧೈರ್ಯದಿಂದ ಎಲ್ಲವನ್ನು ಎದುರಿಸಿ ನಿಂಗಮ್ಮ ಮುನ್ನುಗ್ಗಿ ನಡೆದಳು.

ನಿಂಗಮ್ಮ ಪಾರಿಜಾತ ಆಟ ಆಡುವುದಕ್ಕೆ ಹತ್ತು ಹಲಾವರು ಯೋಜನೆಗಳನ್ನು ಹಾಕಿಕೊಂಡಿದ್ದಳು. ಜಾತ್ರೆ, ಉತ್ಸವ, ಓಕುಳಿ ಹಬ್ಬ, ಹುಣ್ಣಿಮೆ ಹೀಗೆ ವಿಶೇಷ ದಿನಗಳಂದು ಆಟಗಳನ್ನು ಆಡುತ್ತಿದ್ದಳು. ಯಾವುದೇ ಊರಲ್ಲಿ ವಿಶೇಷ ಜಾತ್ರೆ, ಓಕುಳಿ ಇದೆ ಎಂದರೆ ನಿಂಗಮ್ಮ ಪಾರಿಜಾತದ ಪ್ರದರ್ಶನ ಇರುತ್ತಿತ್ತು. ಇದರಿಂದ ನಿಂಗಮ್ಮನ ಕಂಪನಿಯೂ ಬೆಳೆದು, ಇನ್ನೊಂದು ಕಡೆ ಪಾರಿಜಾತ ನಾಟಕವೂ ಜನಪ್ರಿಯವಾಗಲು ಕಾರಣವಾಯಿತು.

ನಿಂಗಮ್ಮ ಕಂಪನಿಯ ಮಾಲಿಕಳು ಮಾತ್ರ ಆಗಿರದೆ ಒಬ್ಬ ಅಪೂರ್ವ ಕಲಾವಿದೆಯಾಗಿದ್ದಳು. ಅವಳು ಕಲಾವಿದರ ಮನಸ್ಸನ್ನು ಅರ್ಥ ಮಾಡಿಕೊಳ್ಳುತ್ತಿದ್ದಳು. ಹೀಗೆ ಇವಳ ಸಮಕಾಲೀನ ನಾಟಕ ಕಂಪನಿಗಳಲ್ಲಿ, ಇವಳ ಕಂಪನಿಯಲ್ಲಿರುವಂತೆ ಶ್ರೇಷ್ಠ ಕಲಾವಿದರು ಇರಲಿಲ್ಲ.

ನಿಂಗಮ್ಮ ಕಲಾವಿದರನ್ನು ತನ್ನ ಕಡೆ ಸೆಳೆದುಕೊಳ್ಳುತ್ತಿದ್ದಳು. ಹಾಗೂ ನಿಂಗವ್ವ ತುಂಬ ತಿಳುವಳಿಕೆ ಯುಳ್ಳವಳಾಗಿದ್ದಳು. ಕಲಾವಿದರು ಕಂಪನಿಯನ್ನು ಬಿಟ್ಟು ಹೋಗದಂತೆ ಕರಾರು ಸಹ ಮಾಡಿಸಿಕೊಳ್ಳುತ್ತಿದ್ದಳು. ಕಂಪನಿಯ ಶ್ರೇಯಸ್ಸಿಗಾಗಿ ಒಳ್ಳೆ ಕಲಾವಿದರನ್ನು ತಂದು ತಯಾರು ಮಾಡುತ್ತಿದ್ದಳು. ಶಿವಗುರಿ, ಬರಗಿ

ರಾಚಯ್ಯ, ಇವಳ ಕಂಪನಿಯಲ್ಲಿ ವಿಶೇಷ ಪರಿಣಿತಿ ಪಡೆದುಕೊಂಡರು. ನಿಂಗಮ್ಮ ಕಲಾವಿದರನ್ನು ಹುಡುಕುತ್ತಿದ್ದಳು ಮತ್ತು ಹುಡುಕಿಕೊಂಡು ಬಂದು ರೂಪಿಸುತ್ತಿದ್ದಳು.

"ಶಿವಗುರಿಯನ್ನು ಕಂಪನಿಗೆ ಕರೆತಂದದ್ದು. ನರಸಾಪುರದ ಸಮೀಪದಲ್ಲಿ ಗೊಡಚಿ ಗ್ರಾಮಕ್ಕೆ ಹೋಗಿ ಕೌಜಲಗಿ ನಿಂಗಮ್ಮ ಪಾರಿಜಾತ ಕಲಾಪ್ರದರ್ಶನ ನೀಡಿ ನಿಂಗಮ್ಮನ ಕಲಾತಂಡ ಮರುದಿನ ರಾಯದುರ್ಗಕ್ಕೆ ಹೊರಟಿತು. ನರಸಾಪುರಕ್ಕೆ ಸಮೀಪದ ಊರಾಗಿದ್ದುದರಿಂದ ಶಿವಗುರಿಯೂ ಎಂದಿನಂತೆ ಪಾರಿಜಾತ ನೋಡಿ ಮರುದಿನ ತನ್ನ ಆಕಳು, ದನ, ಕುರಿಗಳನ್ನು ಮೇಯಿಸುತ್ತಿರುವಾಗ ಪಾರಿಜಾತದ ಹಾಡುಗಳನ್ನು ಹಾಡುತ್ತಿದ್ದನು. ಅವಳ ಹಾಡುಗಳನ್ನು ಎತ್ತಿನ ಗಾಡಿಯಲ್ಲಿ ಹೋಗುತ್ತಿದ್ದ ನಿಂಗಮ್ಮ ಕೇಳಿಸಿಕೊಳ್ಳುತ್ತಾರೆ. ಅವನ ಹಾಡುಗಾರಿಕೆ ನಿಂಗವ್ವನ ಮನಸ್ಸನ್ನು ಸೆಳೆಯುತ್ತದೆ. ಶಿವಗಿರಿಯನ್ನು ನೋಡಿ ನೀನು ಕಂಪನಿಗೆ ಬರುತ್ತಿಯ ಎಂದು ಕೇಳಿ, ಅವರ ತಂದೆತಾಯಿಯರನ್ನು ಒಪ್ಪಿಗೆ ಪಡೆದುಕೊಂಡು ಬಂದಳು."[೨೪] ಒಬ್ಬ ಕಲಾವಿದ ಇನ್ನೊಬ್ಬ ಕಲಾವಿದರನ್ನು ಗುರುತಿಸಿ ಅವರಿಗೆ ಪ್ರೋತ್ಸಾಹಿಸುವುದು, ಗುರುತಿಸಿವುದು ಕಲಾವಿದರ ದೊಡ್ಡ ಗುಣವಾಗಿರುತ್ತದೆ. ಆ ದೊಡ್ಡ ಗುಣ ಕೌಜಲಗಿ ನಿಂಗಮ್ಮನಲ್ಲಿ ಇತ್ತು. ಹೀಗಾಗಿ ಒಳ್ಳೆಯ ಕಲಾವಿದರು ಇವಳ ಕಂಪನಿಗೆ ಬರುತ್ತಿದ್ದಳು.

ನಿಂಗಮ್ಮ ಸ್ವಂತ ಕಂಪನಿಯನ್ನು ಯಾವಾಗ ಕಟ್ಟಿದಳೆಂದು ಖಚಿತವಾಗಿ ಹೇಳುವುದು ಕಷ್ಟ. "ಕುಲಗೋಡ ತಮ್ಮಣ್ಣನ ಮರಣದ ನಂತರ ಆತನ ಮೇಳದಲ್ಲಿ ಪ್ರಮುಖರಾದ ಹುಕ್ಕೇರಿ ಸಿದ್ದರಾಮಪ್ಪ, ತನ್ನದೇ ಆದ ಪಾರಿಜಾತ ಮೇಳವನ್ನು ಕಟ್ಟಿದನು. ಕೌಜಲಗಿ ನಿಂಗಮ್ಮ ಉಳಿದ ಕೆಲವು ನಟರೊಂದಿಗೆ ಮೂಲಮೇಳವನ್ನು ಮುಂದುವರಿಸಿಕೊಂಡು ಬಂದಳು. ಸಿದ್ದರಾಮಪ್ಪನ ಮೇಳದಲ್ಲಿ ಬಹುಕುಂದ್ರಿ ಬಸಪ್ಪ ಇಬ್ಬರೂ ಒಂದೇ ಮೇಳದಲ್ಲಿದ್ದು ಪಾರಿಜಾತ ಆಟದ ಕೀರ್ತಿಯನ್ನು ನಾಡಿನ ತುಂಬ ಹಬ್ಬಿಸಿದರು."[೨೫]

ಆರಂಭದಲ್ಲಿ ನಿಂಗಮ್ಮನ ಕಂಪನಿಯಲ್ಲಿದ್ದ ನಟರು "ಸರ್ವ ಶ್ರೀ ಸಿದ್ಧರಾಮಪ್ಪ ಹುಕ್ಕೇರಿ, ಬಸಪ್ಪ ಬುಡಕುಂದ್ರಿ, ಗುಂಡಪ್ಪ, ಕಲಾಗವಿ ರಾಮಣ್ಣ, ಬಾಗೇವಾಡಿ ರಾಜೆಸಾಹೇಬ, ಮಹಲಿಂಗಪುರ ರಾಮಜಿ ನಣದಿ, ಅಪ್ಪಾಲಾಲ ಬರಗಿ, ರಾಚಯ್ಯಸ್ವಾಮಿ ಬರಗಿ, ಶಿವುಗುರು ನರಸಾಪುರ (ಶಿವಗುರಿ), ಶಂಕರಯ್ಯಸ್ವಾಮಿ ಅಂಬಲಜೇರಿ, ರಾಮಣ್ಣ ಕಪುಟಕೊವು, ರಾಮಣ್ಣ ಹಿಡಿತದಲ್ಲಿ, ರುದ್ರಯ್ಯ ಸ್ವಾಮಿ ಸತ್ತಿಗೇರಿ, ಶಂಕರಪ್ಪ ನಾವಲಗಿ ಮೊದಲಾದ ಹಿರಿಯ ಕಲಾವಿದರು ನಿಂಗಮ್ಮನವರ ಗರಡಿಯಲ್ಲಿ ಉಳಿಸಿದರು. ಸರ್ವಶ್ರೀ ನಿಂಗಪ್ಪ ಮಹಾದೇವಪ್ಪ ಕೌಜಲಗಿ, ಯಲ್ಲಪ್ಪ ಪೂಜಾರಿ, ಮಹಾದೇವಪ್ಪ, ಚಮ್ಮಡ ರಾಮಣ್ಣ, ಅಲಗೂರು ಗಾಳೆಪ್ಪತೊಂಡಿ ಕಟ್ಟಿ, ಚಂದಾಸಾಬ, ಅಲಗೂರು ಶಂಕರಪ್ಪ ಹಿಡಿತದಲ್ಲಿ ಶ್ರೀಮತಿ ರೇಣುಕಾ ಮಾಲಾಪುರ ಮೊದಲಾದವರು."[೨೬]

ನಿಂಗಮ್ಮ ಸ್ವಂತ ಕಂಪನಿಯನ್ನು ಕಟ್ಟಿಕೊಂಡು ರಂಗಭೂಮಿಯಲ್ಲಿ ಅಗಾಧ ಸಾಧನೆಯನ್ನು ಮಾಡಿದ್ದಾಳೆ. ಪಾರಿಜಾತ ಉನ್ನತ ಶಿಖರಕ್ಕೆ ಮುಟ್ಟಲು ಬಹುಪಾಲು ಕೌಜಲಗಿ ನಿಂಗಮ್ಮನೇ ಕಾರಣ. ನಿಂಗಮ್ಮ ಒಬ್ಬ ಕಲಾವಿದೆಯಾಗಿ ಹಲವಾರು ಕಲಾವಿದರಿಗೆ ದಾರಿದೀಪವಾಗಿದ್ದಾಳೆ.

**೨. ಇತ್ತೀಚಿನ ದಿನಗಳಲ್ಲಿ ಕೌಜಲಗಿ ನಿಂಗಮ್ಮನ ಕಂಪನಿಯ ಸ್ಥಿತಿಗತಿ**

ಕೌಜಲಗಿ ನಿಂಗಮ್ಮ ಸ್ಥಾಪನೆ ಮಾಡಿದ ಪಾರಿಜಾತ ನಾಟಕದ ಕಂಪನಿಯನ್ನು ನಿಂಗಮ್ಮನ ವಾರುಸುದಾರನಾದ ಮಹಾದೇವಪ್ಪ ನಡೆಸಿಕೊಂಡು ಬಂದರು. ನಂತರ ಇವರ ಜೊತೆಯಲ್ಲಿ ಅಕ್ಕ ಚಂದ್ರವ್ವನ ನಂತರ ಮಹಾದೇವಪ್ಪನ ಮಗ ಶ್ರೀ ನಿಂಗಪ್ಪ ಕೌಜಲಗಿ ನಡೆಸಿಕೊಂಡು ಬಂದರು. ಈಗ ಇವರ ಧರ್ಮಪತ್ನಿ ಶ್ರೀಮತಿ ಕಮಲವ್ವಾ ಕೌಜಲಗಿ ನಡೆಸಿಕೊಂಡು ಹೋಗುತ್ತಿದ್ದಾರೆ. ಹಾಗೂ ಇವಳ ಜೊತೆ ಇವಳ ಮಗನಾದ ಮಹಾದೇವ ಒಳಗುಡಿ ಈ ಕಂಪನಿಯನ್ನು ಬೆಳೆಸಿಕೊಂಡು ಬಂದಿದ್ದಾರೆ. ಈ ಕಂಪನಿಗೆ "ದಿ ಕೌಜಲಗಿ ನಿಂಗಮ್ಮಳ ಪಾರಿಜಾತ ಆಟ ಕಂಪನಿ" ಎಂದು ಹೆಸರಿಟ್ಟಿದ್ದಾರೆ. ಈ ಕಂಪನಿಯ ಪರಿಸ್ಥಿತಿ ಉತ್ತಮವಾಗೇನೂ ಇಲ್ಲ. ಸುದೀರ್ಘ ಪರಂಪರೆ ಇರುವ ಈ ಕಂಪನಿಯನ್ನು ಬೆಳೆಸಿಕೊಂಡು ಬಂದಿದ್ದಾರೆ. ಈ ಕಂಪನಿಗೆ ಯಾರೂ ಅಷ್ಟಾಗಿ ಹಚ್ಚಿಕೊಂಡಿಲ್ಲ ಎಂದು ಮರುಗುತ್ತಾ ಕಮಲವ್ವ ಹೇಳಿದರು. ನಾನು ಸು. ೧೬ ವರ್ಷದಿಂದ ಈ ಕಂಪನಿಯನ್ನು ನಡೆಸಿಕೊಂಡು ಬಂದಿದ್ದೇನೆ. ನಾವು ಆರ್ಥಿಕವಾಗಿ ತುಂಬಾ ಸೊರಗಿ ಹೋಗಿದ್ದೇನೆ. ಒಂದೊಂದು ಸಲ ಊಟಕ್ಕೂ ಚಿಂತೆ ಮಾಡಬೇಕಾಗುತ್ತದೆ. ಜೀವನಕ್ಕೋಸ್ಕರ ಬೀಡಾ ಅಂಗಡಿ ಮಾಡಿಕೊಂಡಿದ್ದೇವೆ. ಆದರೆ ನಾವು ಮೂಲವೃತ್ತಿಯನ್ನು ಬಿಟ್ಟಿಲ್ಲ. ನಮ್ಮ ಮನೆಯನ್ನು "ನಿಂಗಮ್ಮಳ ಆಟಾದ ಮನೆ" ಎಂದೇ ಕರೆಯುತ್ತಾರೆ. ನಮಗೆ ಈ ಆಟದಿಂದ ಇಂದಿಗೂ ಗೌರವ ನೀಡುತ್ತಾರೆ. ಅದನ್ನು ನಾವು ಉಳಿಸಿಕೊಂಡು ಹೋಗುತ್ತಿದ್ದೇವೆ. ನಮಗೆ ಎಷ್ಟೇ ಕಷ್ಟ ಬಂದರೂ ನಾವು ಈ ಕಂಪನಿಯನ್ನು ಮುಂದುವರಿಸಿಕೊಂಡು ಹೋಗುತ್ತೇವೆ. ಅದು ನಮ್ಮ ಕರ್ತವ್ಯವಾಗಿದೆ ಎಂದೇ ನಾವು ಭಾವಿಸಿದ್ದೇವೆ.

"ನಾನು ಮೊದಲು ಆಟ ಆಡುತ್ತಿರಲಿಲ್ಲ. ನನ್ನ ಮರಣದ ನಂತರ ನೀನು ಆಟ ಪ್ರಾರಂಭ ಮಾಡು ಎಂದು ನನ್ನ ಗಂಡ ನನ್ನ ಹತ್ತಿರ ವಚನ ತೆಗೆದುಕೊಂಡಿದ್ದು ಆ ಕಾರಣಕ್ಕೆ. ನಾನು ಆಟ ಆಡಲು ಪ್ರಾರಂಭಿಸಿದೆ." "ನಾ ಸತ್ತ ಮೇಲೆ ಈ ಕಂಪನಿ ಯಾರು ಮುಂದುವರಿಸಿಕೊಂಡು ಹೋಗುತ್ತಾರೆ. ಕಮಲಾ ನೀನೇ ಮುಂದುವರಿಸಿಕೊಂಡು ಹೋಗು ಎಂದು ಇದು ನಿಂಗಮ್ಮನ ಕಂಪನಿ ಎಂದಿಗೂ ನಿಲ್ಲಿಸಕೂಡದು." ಎಂದು ವಚನ ತೆಗೆದುಕೊಂಡಿದ್ದರು. ನಮ್ಮ ಮನೆಯನ್ನು ಆಟದವರ ಮನೆ ಅಂತ ಕರೆಯುತ್ತಾರೆ. 'ನಿಂಗಮ್ಮನ ಆಟದ ಮನೆ'ಯೆಂದು ಎಂದು ಕರೆಯುತ್ತಾರೆ. ಹೀಗಿರಬೇಕಾದಲ್ಲಿ ನಾನು ಏಕೆ ಚಿಂತೆ

ಮಾಡಬೇಕು ಎಂದು ನಾನೆ 'ಈ ಕಂಪನಿಯ ಜವಾಬ್ದಾರಿಯ ವಹಿಸಿಕೊಂಡೆ. ನಾನು ರುಕ್ಮಿಣಿ, ಸತ್ಯಭಾಮ, ಕೊರವಂಜಿ' ಪಾತ್ರವನ್ನು ಮಾಡಿದ್ದೇನೆ. ಈಗಲೂ ಓಕುಳಿ ಸಂದರ್ಭದಲ್ಲಿ ಕೌಜಲಗಿಯಲ್ಲಿ ಪ್ರತಿವರ್ಷ ನಾಟಕ ಮಾಡಲು ಕರೆಯುತ್ತಾರೆ. ಆಗ ಹೋಗಿ ಪಾರಿಜಾತ ಆಟ ಆಡಿ ಬರುತ್ತೇವೆ. ಒಂದು ಆಟಕ್ಕೆ ೩೦೦೦.೦೦ ರೂ. ಬೇಕಾಗುತ್ತದೆ. ಕಂಪನಿ ೯ ರಿಂದ ೧೦ ಜನ ಕಲಾವಿದರನ್ನು ಒಳಗೊಂಡಿರುತ್ತದೆ. ಅವರ ಸಂಭಾವನೆ ಹಾಗೂ ಊಟ ತಿಂಡಿ ಮತ್ತು ಬಸ್ ಚಾರ್ಜ್ ಇವುಗಳ ವೆಚ್ಚಗಳ ಸಹ ನೋಡಿಕೊಳ್ಳ ಬೇಕಾಗುತ್ತದೆ. ಒಂದೊಂದು ಸಲ ಒಂದು ಊರಲ್ಲಿ ೧೨೦೦ ಕೊಡುತ್ತಾರೆ. ಅಂತಹ ಸಂದರ್ಭದಲ್ಲಿ ನಾವೇ ಕೈಯಿಂದ ಕಲಾವಿದರಿಗೆ ಹಣ ಕೊಡಬೇಕಾಗುತ್ತದೆ. ಇಲ್ಲವಾದರೆ ಕಲಾವಿದರು ಮತ್ತೆ ಕರೆದಾಗ ಬರುವುದಿಲ್ಲ. ಹೀಗಾಗಿ ಈ ಕಂಪನಿಯನ್ನು ನಡೆಸಿಕೊಂಡು ಹೋಗುವುದೇ ಕಷ್ಟವಾಗಿದೆ.

ಒಂದು ಸಲ ಕೌಜಲಗಿಯಯಲ್ಲಿ ಆಟ ಆಡುವುದಕ್ಕೆ ಹೇಳಿದರು. ಅದು ರಂಗಮಂದಿರ ಉದ್ಘಾಟನಾ ಸಂದರ್ಭದಲ್ಲಿ. ಇದು ಕೌಜಲಗಿಯಲ್ಲಿ ನಿಂಗಮ್ಮ ಪ್ರತಿವರ್ಷ ಓಕುಳಿ ಹಬ್ಬದ ದಿನ ಬಂದು ಪಾರಿಜಾತ ಆಟವಾಡುತ್ತಿದ್ದ ಜಾಗದಲ್ಲಿ ನಿಂಗಮ್ಮನ ಸ್ಮರಣೆಯಲ್ಲಿ ನಿಂಗಮ್ಮನಲ್ಲಿ "ದಿ. ಕೌಜಲಗಿ ನಿಂಗಮ್ಮ ರಂಗಮಂದಿರ" ಸ್ಥಾಪನೆ ಮಾಡಲಾಗಿದೆ. ಕಮಲವ್ವ ಈ ರಂಗಮಂದಿರ ಉದ್ಘಾಟನೆಯಲ್ಲಿ ಮೇಳದ ಜೊತೆಗೂಡಿ ಹೋಗಿದ್ದಳಂತೆ. ಪ್ರದರ್ಶನಕ್ಕೆ ಸಹಯಾಧನವನ್ನು ನೀಡುವುದಾಗಿ ಹೇಳಿದ್ದಳಂತೆ. ಆಟ ಆದನಂತರ ಕಲಾಮೇಳಕ್ಕೆ ಏನು ಕೊಡದೆ, ಫ್ರೀ ಮಾಡಿ ಎಂದು ಹೇಳಿದಳಂತೆ. ಕಮಲವ್ವ ತನ್ನ ಕೊರಳೊಳಗಿನ ಬೊರಮ್ಮಳ ಸರವನ್ನು ಮಾರಿ ಕಲಾವಿದರಿಗೆ ಸಂಭಾವನೆ ನೀಡಿದಳು ಎಂದು ಊರಿವರು ಹೇಳಿದರು.

"ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಸಹ ಏನು ದೊರತಿಲ್ಲ. ಈಗಲೂ ಸಹ ಓಕುಳಿ ಹಬ್ಬಕೊಮ್ಮೆ ಕೌಜಲಗಿ ಪಾರಿಜಾತ ಆಡಲೂ ಹೋಗುತ್ತಾರೆ. ೧,೨೦೦ ರೂ ಹಾಗೂ ಒಂದು ಸೀರೆಯನ್ನು ಕೊಡುತ್ತಾರೆ. ಕಲಾಮೇಳದಲ್ಲಿಗೆ ಪ್ರತಿಯೊಬ್ಬ ಕಲಾವಿದರ ಸಂಭಾವನೆ ೨೦೦ ರಿಂದ ೨೫೦ ರೂ.ಗಳನ್ನು ನಿಗದಿ ಮಾಡಿರುತ್ತಾರೆ. ಈ ಕಂಪನಿಯನ್ನು ಬೆಳೆಸಿಕೊಂಡು ಹೋಗಬೇಕಾಗಿದೆ. ಆದಕಾರಣ ಎಷ್ಟೇ ಕಷ್ಟ ಬಂದರೂ ಕಂಪನಿಯನ್ನು ಕೈಬಿಡುವುದಿಲ್ಲ. ನನ್ನ ಮಗ ಮಹಾದೇವ ಅಂಗವಿಕಲನಾದರೂ ಆದರೂ ಸಹ ತಾಳಹಾಕುತ್ತಾ ಕಂಪನಿಯಲ್ಲಿ ಚಟುವಟಿಕೆಯಿಂದಿದ್ದಾನೆ. ಅವನ ಕೈಯಲ್ಲಿ ಮೂರು ಮೂರು ಬೆರಳುಗಳು ಮಾತ್ರ ಇವೆ. ತಾಳ ಹಾಕುವಾಗ ಅಂಗವಿಕಲ ಎಂದು ಯಾರೂ ಗುರುತಿಸುವುದಕ್ಕೆ ಸಾಧ್ಯವಿಲ್ಲ.

ನಿಂಗಮ್ಮ ಹುಟ್ಟುಹಾಕಿದ ಪಾರಿಜಾತ ನಾಟಕ ಕಂಪನಿ ಇತ್ತೀಚಿನ ದಿನಗಳಲ್ಲಿ ಕುಸಿದು ಹೋಗುವ

ಸ್ಥಿತಿಯಲ್ಲಿದೆ. ಅದರ ಪೋಷಣೆ ಅಗತ್ಯವಾಗಿದೆ. ಈ ಕಂಪನಿಯ ಕಲಾವಿದರಿಗೆ ಸಹಾಯಧನ ನೀಡಬೇಕು ನಿಂಗಮ್ಮನ ಸಾಧನೆ ಅಪಾರವಾಗಿದೆ. ಅವಳ ನೆನಪಿಗೋಸ್ಕರ ಈ ಕಂಪನಿಯನ್ನು ಪುನರುಜ್ಜೀವನಗೊಳಿಸಬೇಕಾಗಿದೆ.

■■

**ಟಿಪ್ಪಣಿಗಳು**

೧. ಕರ್ನಾಟಕ ಜಾನಪದ, ಡಾ. ನಿಂಗಣ್ಣ ಸಣ್ಣಕ್ಕಿ ಪು.೧೪೬

೨. ಜಾನಪದ ೧೯೯೧, ಸಂ. ಜಿ.ಎನ್. ಭಟ್ಟ, ಪು.೧೪೫

೩. ಸಾಧನೆ ಸಂ. ೬, ಭುಜೇಂದ್ರ ಮಹೇಶವಾಡಿ, ಪು.೯

೪. ಅಪರಾಳ ತಮ್ಮಣ್ಣ ಕೃತಿ ಶ್ರೀಕೃಷ್ಣ ಪಾರಿಜಾತ, ಆರ್.ಜಿ. ಕುಲಕರ್ಣಿ ಅರಕೇರಿ, ಪು.೭೫-೭೬

೫. ಅದೇ...ಪು.೮೨

೬. ಅದೇ...ಪು.೮೨

೭. ಅಪರಾಳ ತಮ್ಮಣ್ಣ ಕೃತಿ ಶ್ರೀಕೃಷ್ಣ ಪಾರಿಜಾತ, ಆರ್.ಜಿ. ಕುಲಕರ್ಣಿ ಅರಕೇರಿ, ಇದನ್ನು ಶ್ರೀಕೃಷ್ಣ ಪಾರಿಜಾತ ಪ್ರಸ್ತಾವನೆ ಭಾಗದಿಂದ ಆಯ್ದುಕೊಳ್ಳಲಾಗಿದೆ. ಪು.೮೩

೮. ಅಪರಾಳ ತಮ್ಮಣ್ಣ ಕೃತಿ ಶ್ರೀಕೃಷ್ಣ ಪಾರಿಜಾತ, ಆರ್.ಜಿ. ಕುಲಕರ್ಣಿ ಅರಕೇರಿ, ಇದನ್ನು ಶ್ರೀಕೃಷ್ಣ ಪಾರಿಜಾತ ಕಾವ್ಯ ಭಾಗದಿಂದ ಆಯ್ದುಕೊಳ್ಳಲಾಗಿದೆ.

೯ ಶ್ರೀಕೃಷ್ಣ ಪಾರಿಜಾತ : ಒಂದು ಅಧ್ಯಯನ, ಶ್ರೀರಾಮ ಇಟ್ಟಣ್ಣನವರ, ಪು.೪೬

೧೦. ಎಂ.ಎನ್. ಸುಂಕಾಪುರ್, ಕುಲಗೋಡ ತಮ್ಮಣ್ಣ, ಶ್ರೀಕೃಷ್ಣ ಪಾರಿಜಾತ, ಪು.೧೭

೧೧. ಅಪರಾಳ ತಮ್ಮಣ್ಣ ಕೃತಿ ಶ್ರೀಕೃಷ್ಣ ಪಾರಿಜಾತ, ಆರ್.ಜಿ. ಕುಲಕರ್ಣಿ ಅರಿಕೇರಿ, ಪು.೮೮-೮೯

೧೨. ಕುಲಗೋಡ ತಮ್ಮಣ್ಣನ ಶ್ರೀಕೃಷ್ಣ ಪಾರಿಜಾತ ಸಾರಾಂಶವನ್ನು ಕುಲಗೋಡ ತಮ್ಮಣ್ಣ ಕೃತ ಶ್ರೀಕೃಷ್ಣ ಪಾರಿಜಾತ ಬಯಲಾಟ (ಸಂ. ಡಾ.ಎಂ.ಎನ್. ಸುಂಕಾಪುರ್)ದಿಂದ ಆಯ್ದುಕೊಳ್ಳಲಾಗಿದೆ.

೧೩. ಉತ್ತರ ಕರ್ನಾಟಕದ ಬಯಲಾಟಗಳು, ಸಂ. ಡಾ. ಬಸವರಾಜ ಮಲಶೆಟ್ಟಿ, ಪು.೧೬೪

೧೪. ಅಪರಾಳ ತಮ್ಮಣ್ಣ ಕೃತಿ ಶ್ರೀಕೃಷ್ಣ ಪಾರಿಜಾತ, ಸಂ. ಆರ್.ಜಿ. ಕುಲಕರ್ಣಿ, ಪು.೯೦

೧೫. ಡಾ. ಅಶೋಕ ನರೋಡೆಯವರ ಹೇಳಿಕೆ.

೧೬. ಕೌಜಲಗಿ ನಿಂಗಮ್ಮ, ಸಂ. ಶ್ರೀರಾಮ ಇಟ್ಟಣ್ಣನವರ, ಪು.೨೫

೧೭. ವಕ್ತೃರು, ಬಿ.ಎಂ. ಕೌಜಲಗಿ

೧೮. ಕೌಜಲಗಿ ನಿಂಗಮ್ಮ, ಶ್ರೀರಾಮ ಇಟ್ಟಣ್ಣನವರ, ಪು.೨೬

೧೯. ಅದೇ...ಪು.೨೮

೨೦. ಜಾನಪದ ಜಗತ್ತು, ವಿಶೇಷ ಸಂಚಿಕೆ, ಮಡಿಲಿಕ್ಕಿ, ಡಾ. ಬಸವರಾಜು ಮಲಶೆಟ್ಟಿ, ಪು.೮೫

೨೧. ವಕ್ತೃರು, ಬಿ.ಎಂ. ಕೌಜಲಗಿ

೨೨. ವಕ್ತೃರು, ರಾಮಪ್ಪ ಹನುಮಂತಪ್ಪ ಪೂಜಾರಿ

೨೩. ಕನ್ನಡ ಜಾನಪದ, ವಿಶ್ವಕೋಶ, ಸಂ.೧, ಪು.೫೭೯

೨೪. ಕೋಗಿಲೆ ಕಂಠದ ಕೊರವಂಜಿ ಶಿವಗುರಿ, ಈಶ್ವರ ಚಂದ ಬೆಟಗೇರಿ, ಪು.೩೮೨

೨೫. ಕನ್ನಡ ಜಾನಪದ ಸಾಹಿತ್ಯ, ಡಾ.ಬೆಟಗೇರಿ ಕೃಷ್ಣಶರ್ಮ, ಪು.೯೮

೨೬. ಕಲಾಜ್ಯೋತಿ ದಿ ಕೌಜಲಗಿ ನಿಂಗಮ್ಮ, ಬಾಳೇಶ ಲಕ್ಷೆಟ್ಟಿ, ಪು.೩

# ಸಮಾರೋಪ

ಭಾರತದಂತಹ ದೇಶದಲ್ಲಿ, ಅದರಲ್ಲೂ ಶ್ರೇಣೀಕೃತ ವ್ಯವಸ್ಥೆಯು ಪೋಷಿಸಿಕೊಂಡು ಬಂದ ವಿಷಮ ಸಮಾಜದಲ್ಲಿ ಬದುಕುವ ದುರ್ಬಲ ಸಮುದಾಯಗಳು ತಮ್ಮ ಅಂತರಂಗದಲ್ಲಿನ ಕ್ಷೋಭೆಗಳನ್ನು, ತಲ್ಲಣಗಳನ್ನು ಇಲ್ಲವಾಗಿಸಿಕೊಳ್ಳಲು ಸದಾ ಪ್ರಯತ್ನಿಸುತ್ತಲೇ ಇರುತ್ತವೆ. ರಾಜಕೀಯವಾಗಿ ಪ್ರತಿಭಟಿಸಲಾಗದ ಹಂತದಲ್ಲಿ ತಮ್ಮ ಮೂಕಸ್ಥಿತಿಯನ್ನೇ ಸೃಜನಶೀಲವಾಗಿ ಬಳಸಿಕೊಂಡು ಮಹತ್ತರವಾದ ಅಭಿವ್ಯಕ್ತಿಗಳಿಗೆ ಇಲ್ಲಿನ ಶ್ರಮಿಕವರ್ಗ ಕಾರಣವಾಗಿದೆ. ಈ ಬಗೆಯ ಗುಪ್ತ ಅಭಿವ್ಯಕ್ತಿಯ ಕ್ರಮ, ಬಹಳ ಸಲ ಸಮುದಾಯವೊಂದು ಶೋಷಕ ಪ್ರವೃತ್ತಿಗಳ ವಿರುದ್ಧ ಬಹಿರಂಗ ಹೋರಾಟಕ್ಕಿಳಿಯುವುದನ್ನು ನಿಯಂತ್ರಿಸಿ ಬಿಡುತ್ತದೆ. ಶೋಷಿತರ ಪ್ರತಿಭಟನೆ ಹೀಗೆ ಸಂಕೇತಗಳ ಹಂತದಲ್ಲಿಯೇ ಉಳಿದುಬಿಡುವುದಕ್ಕೆ ಲೌಕಿಕದಲ್ಲಿಯೂ ಅನೇಕ ಸಾಮಾಜಿಕ, ಆರ್ಥಿಕ ಕಾರಣಗಳೂ ಇರುತ್ತವೆ. ಭಾರತದಲ್ಲಿ ಆಳುವ ವರ್ಗಕ್ಕೆ ಸಂವಾದಿಯಾಗಿ ದುಡಿವ ವರ್ಗಗಳು ಪ್ರತಿರಾಜಕಾರಣವನ್ನು ಕಲ್ಪಿಸಿಕೊಂಡು, ವ್ಯವಸ್ಥಿತ ಹೋರಾಟಕ್ಕಿಳಿದಿರುವುದು ತುಂಬಾ ಕಮ್ಮಿ. ಕೆಲವೊಮ್ಮೆ ಆದಿವಾಸಿಗಳು ಇದ್ದಕ್ಕಿದ್ದಂತೆ ಸಿಡಿದು ಗೆರಿಲ್ಲಾ ಮಾದರಿಯ ಹೊಡೆದಾಟಗಳಿಗೆ ತಮ್ಮ ಹೋರಾಟಗಳನ್ನು ಸೀಮಿತಗೊಳಿಸಿರುವುದೂ ಉಂಟು. ಆದರೆ ಈ ಬಗೆಯ ಹೋರಾಟಗಳು ಅಂತಿಮವಾಗಿ ಪ್ರತಿರಾಜಕಾರಣವನ್ನು ರೂಪಿಸಲು ವಿಫಲವಾಗುತ್ತಲೇ ಬಂದಿವೆ. ಆದರೆ ಶೋಷಿತರು ತಮ್ಮ ಪ್ರತಿರೋಧಗಳನ್ನು ಸೃಜನಶೀಲ ಹಾದಿಯಲ್ಲಿಯೇ ತೋರುತ್ತಾ ಬಂದಿದ್ದಾರೆ. ದುಡಿವ ವರ್ಗಗಳ ಹಾಡು, ಕುಣಿತ, ನಾಟಕ, ಪುರಾಣ, ಮಹಾಕಾವ್ಯಗಳಲ್ಲಿ ಈ ಬಗೆಯ ಸೃಜನಶೀಲ ಪ್ರತಿರೋಧಗಳು ಸಾಂಕೇತಿಕವಾಗಿ ಒಡಮೂಡಿವೆ. ಇದನ್ನೇ ಪ್ರಸಿದ್ಧ ರಂಗತಜ್ಞರಾದ ಕೆ.ವಿ. ಸುಬ್ಬಣ್ಣ ಹೀಗೆ ವಿವರಿಸುತ್ತಾರೆ "ಈ ತನಕ ನಾನು ನೋಡುತ್ತಾ ಬಂದಿರುವ ನಮ್ಮ ಗ್ರಾಮೀಣ ಸಮುದಾಯಗಳ ರಂಗ ಚಟುವಟಿಕೆಗಳು, 'ಸಮುದಾಯ ರಂಗಭೂಮಿ'ಯ ಒಂದು ವಿಶಿಷ್ಟ ಲಕ್ಷಣವನ್ನು ನನಗೆ ಮನದಟ್ಟು ಮಾಡಿಕೊಟ್ಟಿವೆ. ಅದೆಂದರೆ ಈ ಸಮುದಾಯಗಳಿಗೆ ರಂಗಭೂಮಿಯೆನ್ನುವ (ಅಥವಾ ಕಾವ್ಯ, ಸಂಗೀತ ಮುಂತಾದವೂ ಕೂಡ) ಕೇವಲ 'ದೇಖಾವೆ'ಯ ವಸ್ತುಗಳಲ್ಲ, ತಾವು ತಮ್ಮಲ್ಲಿ ತಂದುಕೊಂಡು

ಸ್ವತಃ ಆಚರಿಸಿಕೊಳ್ಳಬೇಕಾದ ಆಚರಣೆಗಳು."(ಕೆ.ವಿ. ಸುಬ್ಬಣ್ಣ ೨೦೦೨-೧೯) ಆದರೆ ಸಮುದಾಯಗಳ ಪ್ರತಿರೋಧವನ್ನೇ ಪ್ರಧಾನವಾಗಿಟ್ಟುಕೊಂಡು ಇವುಗಳ ಸೃಜನಶೀಲತೆಯನ್ನು ಅಳತೆ ಮಾಡಬೇಕಿಲ್ಲ. ಅಭಿಜಾತ ಕಲಾ ಮೀಮಾಂಸೆ ನಿರೀಕ್ಷಿಸುವ ಎಲ್ಲ ಬಗೆಯ ಲಕ್ಷಣಗಳು ಸಹಜವಾಗಿಯೇ ಇವರ ಅಭಿವ್ಯಕ್ತಿಗಳಿಗೆ ದತ್ತವಾಗಿರುತ್ತವೆ.

ಶೋಷಿತರ ಸಾಮುದಾಯಿಕ ಆಶಯಗಳು ವ್ಯಷ್ಟಿ ನೆಲೆಯಲ್ಲಿ ಒಡಮೂಡಿದ ಕಾರಣಕ್ಕಾಗಿಯೇ ಇವರ ಅಭಿವ್ಯಕ್ತಿಗಳಿಗೆ ಸಹಜವಾಗಿಯೇ ಪ್ರತಿಭಟಿಸುವ ದನಿ ಪ್ರಾಪ್ತವಾಗಿರುತ್ತದೆ. ಈ ಬಗೆಯ ಸಾಮುದಾಯಿಕ ಒಳ ಕುದಿತಗಳು ಅಂತಸ್ಥವಾಗಿದ್ದುಕೊಂಡೇ ಹೊರಹೊಮ್ಮುವ ಹಾದಿಯನ್ನು ಕಾಯುತ್ತಿರುತ್ತವೆ. ಆ ಸಮುದಾಯದ ನಾಯಕ ಈ ಪ್ರತಿರೋಧಗಳಿಗೆ ದನಿಯಾಗಿ ರೂಪಗೊಳ್ಳುತ್ತಾನೆ. ಹೀಗೆ ಶೋಷಿತ ಸಮುದಾಯಗಳ ಅಭಿವ್ಯಕ್ತಿಗಳನ್ನು ಅವುಗಳ ಸಾಮುದಾಯಿಕ ಆಗುಹೋಗುಗಳ ಭಾಗವಾಗಿಯೇ ನೋಡಬೇಕಿದೆ. ಈ ಸಮುದಾಯದ ಸೃಜನಶೀಲತೆ ಅವುಗಳ ರಾಜಕೀಯಾರ್ಥಿಕ ಆಶಯಗಳ ಮೂಲಕವೇ ಸ್ಫೂರ್ತಿ ಪಡೆದಿರುತ್ತದೆ. ಅವುಗಳ ಕಷ್ಟಸುಖಗಳ, ದೈನಂದಿನ ಬದುಕಿನ ತಾಪತ್ರಯಗಳೇ ಕಲಾತ್ಮಕವಾಗಿ ತಮ್ಮನ್ನು ಪುನರ್‌ರೂಪಿಸಿಕೊಳ್ಳುತ್ತವೆ. ಈ ಎಲ್ಲಾ ಕಾರಣಗಳಿಗಾಗಿ ಶೋಷಿತರ ಅಭಿವ್ಯಕ್ತಿ ಪ್ರಕಾರಗಳನ್ನು ಮತ್ತು ಆ ಸಮುದಾಯಗಳಿಂದ ರೂಪಿಸಲ್ಪಟ್ಟ ಸೃಜನಶೀಲರನ್ನು ಆಯಾ ಸಮುದಾಯಗಳ ಉತ್ಪನ್ನಗಳೆಂದೇ ಪರಿಭಾವಿಸಬೇಕಿದೆ.

ನಾನು ಇಲ್ಲಿ ಅಧ್ಯಯನ ಮಾಡಲು ಹೊರಟಿರುವ ನಿಂಗಮ್ಮ ಎಂಬ ಪ್ರತಿಭಾವಂತ ಕಲಾವಿದೆಯನ್ನು ಅವಳ ಸಮುದಾಯದ ರಾಜಕೀಯಾರ್ಥಿಕ ಹಿನ್ನೆಲೆಯಿಂದ ಅರ್ಥ ಮಾಡಿಕೊಳ್ಳಲು ಯತ್ನಿಸಿದ್ದೇನೆ. ಅಲೆಮಾರಿ ಡೊಂಬರ ಸಮುದಾಯದಲ್ಲಿ ಹುಟ್ಟಿದ ಈ ನಿಂಗಮ್ಮ, ಕನ್ನಡ ರಂಗಭೂಮಿಯ ಮೊದಲ ರಂಗನಟಿಯಾಗಿದ್ದಾಳೆ. ನಿಂಗಮ್ಮ ರಂಗನಟಿಯಾಗಿ ರೂಪಗೊಂಡ ಹಿನ್ನೆಲೆಯಲ್ಲಿ ಸಮುದಾಯದ ಆಶಯಗಳು ಹೆಚ್ಚು ಕೆಲಸ ಮಾಡಿವೆ. ಡೊಂಬರ ಸಮುದಾಯದ ಈ ಸೃಜನಶೀಲ ಒತ್ತಡಗಳು ನಿಂಗಮ್ಮನಂತಹ ಪ್ರತಿಭಾವಂತ ನಟಿಯ ಮೂಲಕ ಹೊರಹೊಮ್ಮಿ ತಮ್ಮನ್ನು ಸಾರ್ಥಕ ಪಡಿಸಿಕೊಂಡಿವೆ. ಪ್ರದರ್ಶನಕಲೆಯನ್ನೇ ತಮ್ಮ ಹೊಟ್ಟೆಪಾಡಿಗಾಗಿ ವೃತ್ತಿಯನ್ನಾಗಿಸಿಕೊಂಡು ಬಂದ ಡೊಂಬರು ಸಂಗೀತ, ನೃತ್ಯ ಮತ್ತು ಇವುಗಳನ್ನು ನೋಡುಗರಿಗೆ ಪ್ರದರ್ಶಿಸುವುದನ್ನು ಒಂದು ಪಾರಂಪರಿಕ ಕರ್ತವ್ಯವೆಂದೇ ಭಾವಿಸಿಕೊಂಡು ಬಂದಿದ್ದಾರೆ. ಇದು ಅವರ ಹೊಟ್ಟೆಪಾಡು ಹೌದು, ಕಲೋಪಾಸನೆಯೂ ಹೌದು. ಇಡೀ ಕರ್ನಾಟಕದಲ್ಲಿ ಸಂಗೀತ ಮತ್ತು ರಂಗಭೂಮಿಯ ಜೊತೆ ಸಂಬಂಧ ಇಟ್ಟುಕೊಂಡು ಬಂದ ಹಲವು ಪ್ರತಿಭಾವಂತರು ಈ ಸಮುದಾಯದಲ್ಲಿ ಸಿಕ್ಕುತ್ತಾರೆ. ಹೀಗಾಗಿ ನಿಂಗಮ್ಮ ತನ್ನ ಸಮುದಾಯದ ಒಟ್ಟು ಆಶೋತ್ತರಗಳನ್ನು ಬಿಂಬಿಸುತ್ತಾಳೆ.

ಭಾರತದ ಶ್ರೇಣೀಕೃತ ಸಮಾಜದ ದೃಷ್ಟಿಯಲ್ಲಿ ಯಾವ ಅಧಿಕಾರಗಳಿಗೂ ಅರ್ಹಳಲ್ಲದ ಮಹಿಳೆಯೊಬ್ಬಳು, ವಸಾಹತುಶಾಹಿ ಕಾಲಘಟ್ಟದಂತಹ ನಿಕೃಷ್ಟ ಅವಧಿಯಲ್ಲಿ ರಂಗನಟಿಯಾಗಲು ಇಚ್ಛಿಸಿದ್ದು, ಒಂದು ಹೆಣ್ಣಾಗಿ ಬೃಹತ್ ನಾಟಕ ಕಂಪನಿಯನ್ನೇ ಕಟ್ಟಿ ಪಾರಿಜಾತದಂತಹ ಕಥನವನ್ನು ಎಲ್ಲರಿಗೂ ತಲುಪಿಸಿ, ಅದು ಜನಪ್ರಿಯವಾಗುವಂತೆ ಮಾಡಿದ್ದು ಸಾಮಾನ್ಯ ಕೆಲಸವೇನಲ್ಲ. ನಿಂಗಮ್ಮ ನಟಿಯಾಗಿ ಮತ್ತು ಸಂಘಟಕಿಯಾಗಿ, ಸಂಗೀತ ತಜ್ಞೆಯಾಗಿ ಹಲವು ಪ್ರಯೋಗಗಳನ್ನು ಮಾಡಿದ್ದಾಳೆ. ಈ ಎಲ್ಲಾ ಪ್ರಯೋಗಗಳ ಹಿಂದೆ ಅವಳ ಚೈತನ್ಯವನ್ನು ರೂಪಿಸಿದ ಸಾಮುದಾಯಿಕ ಆಶಯಗಳು ಕೆಲಸ ಮಾಡಿವೆ. ನನ್ನ ಈ ಅಧ್ಯಯನ ಒಂದು ಜಾತಿ ಸಮುದಾಯಕ್ಕೆ ನಿಂಗಮ್ಮನನ್ನು ಕಟ್ಟಿಹಾಕುವ ಪ್ರಯತ್ನವಂತೂ ಅಲ್ಲ. ದುಡಿವ ವರ್ಗಗಳ ಒಳಗೆ ತಹತಹಿಸುವ ಸೃಜನಶೀಲತೆಯನ್ನು ಅರ್ಥೈಸುವ ಒಂದು ಪುಟ್ಟ ಪ್ರಯತ್ನ ಮಾತ್ರ.

ಡೊಂಬರು ಸಮುದಾಯ ಹಿಂದುಳಿದ ಸಮುದಾಯವಾಗಿದೆ. ಡೊಂಬರ ಮಹಿಳೆಯರ ಬದುಕು, ಇತರ ಸಮುದಾಯದ ಸ್ತ್ರೀಯರ ಜೀವನಕ್ಕೆ ಹೋಲಿಕೆ ಮಾಡಿ ನೋಡಿದರೆ ಭಿನ್ನತೆ ಕಂಡುಬರುತ್ತದೆ. ಪುರುಷಪ್ರಧಾನ ಸಮುದಾಯವಾದ ಕುಟುಂಬದ ಸಂಪೂರ್ಣ ಜವಾಬ್ದಾರಿಯ ಹೊಣೆ ಹೊತ್ತಿರುತ್ತಾಳೆ. ಇವಳನ್ನು ಧಾರ್ಮಿಕ ತಳಹದಿಯ ಮೇಲೆ ಅಧಿಕಾರಸ್ಥ ವರ್ಗದವರ ತುಳಿತಕ್ಕೆ ಒಳಗಾಗಿದ್ದಾಳೆ. ಬದಲಾವಣೆಯಾದ ಸಮಾಜಕ್ಕೆ ಹೊಂದಿಕೊಳ್ಳಲು ಕೆಲವು ಮಹಿಳೆಯರು ರಂಗಭೂಮಿಯಲ್ಲಿ ರಂಗನಟಿಯಾಗಿ ತಮ್ಮ ಬದುಕನ್ನು ಕಂಡುಕೊಂಡಿದ್ದಾಳೆ.

ಕೌಜಲಗಿ ನಿಂಗಮ್ಮ ರಂಗಭೂಮಿಯ ಮೊಟ್ಟಮೊದಲ ರಂಗನಟಿ. ಅಲೆಮಾರಿ ಸಮುದಾಯವೊಂದರಲ್ಲಿ ಹುಟ್ಟಿ ಅನೇಕ ಸಾಮುದಾಯಿಕ ಸಮಸ್ಯೆಗಳನ್ನು ಧೈರ್ಯದಿಂದ ಎದುರಿಸಿ ಮುನ್ನುಗ್ಗಿ ರಂಗಭೂಮಿಯಲ್ಲಿ ಅಪಾರ ಸಾಧನೆ ಮಾಡಿದವಳು. ಉತ್ತರ ಕರ್ನಾಟಕದಲ್ಲಿ 'ಶ್ರೀಕೃಷ್ಣಪಾರಿಜಾತ'ವೆಂದರೆ 'ನಿಂಗಮ್ಮನ ಪಾರಿಜಾತ' ಎಂದೇ ಕರೆಯುತ್ತಾರೆ. ಇವಳು ಒಬ್ಬ ಕಲಾವಿದೆಯಾಗಿ ಹಲವಾರು ಕಲಾವಿದರಿಗೆ ಪ್ರೋತ್ಸಾಹವನ್ನು ನೀಡಿ ಅವರಿಗೆಲ್ಲ ಮಾರ್ಗದರ್ಶಕಳಾಗಿದ್ದಳು. ಅವಳನ್ನು ಜನ ಪಾರಿಜಾತದ 'ಕಲಾಸಿರಿ', 'ಕಲಾದೇವತೆ', 'ಕಲಾತಪಸ್ವಿ' ಎಂದು ಇಂದೂ ಕರೆಯುತ್ತಾರೆ. ನಿಂಗಮ್ಮ ರಂಗಭೂಮಿಯಲ್ಲಿ ತನ್ನ ಜೀವನವನ್ನು ಸಾರ್ಥಕವಾಗಿಸಿಕೊಂಡವಳಾಗಿದ್ದಾಳೆ. ಕಲೆಗಾಗಿ ದುಡಿದ ಇವಳು ಕಲಾವಿದರ ತಾಯಿಯಾಗಿ ಬದುಕಿದವಳು.

ಡೊಂಬರ ಸಮುದಾಯದ ಮಹಿಳೆಯರ ಬಗ್ಗೆ ಇಲ್ಲಿಯವರೆಗೆ ಅಧ್ಯಯನ ನಡೆದಿಲ್ಲ. ಇದೇ ಸಮುದಾಯಕ್ಕೆ ಸೇರಿದ ಕಲಾವಿದೆ ಕೌಜಲಗಿ ನಿಂಗಮ್ಮ ಇಲ್ಲವಾಗಿ ಒಂದು ಶತಮಾನವೇ ಆಗಿದೆ.

ಡೊಂಬರು ಸಮುದಾಯದ ಮಹಿಳೆಯ ಬಗ್ಗೆ ಕ್ಷೇತ್ರಕಾರ್ಯ ಕೈಗೊಂಡು ಈ ಸಮುದಾಯದ ಸ್ತ್ರೀಯರ ಬದುಕು ಹಾಗೂ ಪ್ರಸ್ತುತದಲ್ಲಿ ಅವರ ಜೀವನ ಮತ್ತು ಅವರಿಗೆ ಇರುವ ಸಮಸ್ಯೆಗಳ ಬಗ್ಗೆ ವಿವರಗಳನ್ನು ಕೊಡಲಾಗಿದೆ. ನಿಂಗಮ್ಮ ಇಲ್ಲವಾಗಿ ಸು. ೧೫೦ ವರ್ಷವಾಗಿರುವುದರಿಂದ ಅನೇಕ ವಿಷಯಗಳು ಮುಚ್ಚಿಹೋಗಿವೆ. ಅವರ ಚರಿತ್ರೆ ಜನರ ಬಾಯಿಂದ ಬಾಯಿಗೆ ಹರಿದುಬಂದಿದೆ. ಖಚಿತ ಮಾಹಿತಿ ಪಡೆಯುವುದು ಕಷ್ಟ. ಆದರೂ ಸಹ ನಿಂಗಮ್ಮನ ಜೊತೆ ಒಡನಾಡಿದ ಕೆಲವರು ಈಚೆಗೆ ತೀರಿಕೊಂಡಿದ್ದಾರೆ. ಅವರು ಬಿಟ್ಟುಹೋಗಿರುವ ಅನೇಕ ಸತ್ಯಗಳು ಜನರ ಬಾಯಲ್ಲಿವೆ. ಅವಳು ಮಹಾನ್ ಕಲಾವಿದೆಯಾಗಿದ್ದರಿಂದ ಆ ಕ್ಷೇತ್ರದ ಕೆಲವರು ಹಾಗೂ ಅವರ ಸಮುದಾಯದವರು ತಮ್ಮ ಸಮುದಾಯಕ್ಕೆ ಕಂಡುಬರುವುದು ಎಂದು ತಿಳಿದು, ಸಾಮಾಜಿಕ ಹಿನ್ನೆಲೆಯ ಮಾಹಿತಿ ನೀಡಲು ಮೊದಲು ಹಿಂಜರಿದರು. ಆದರೆ ನಂತರ ನಿಂಗಮ್ಮನ ಕುರಿತು ಎಲ್ಲರೂ ಹೆಮ್ಮೆಯಿಂದ ಮಾತನಾಡಿದರು. ನಿಂಗಮ್ಮನ ಸಾಮಾಜಿಕ ಹಿನ್ನೆಲೆ ಹಾಗೂ ಇವರ ಕಾಲದಲ್ಲಿ ಡೊಂಬರ ಸಮುದಾಯದ ಮಹಿಳೆಯರಿಗೆ ಇದ್ದ ಸಾಮಾಜಿಕ ಸ್ಥಿತಿಗತಿಗಳ ವಿವರಗಳನ್ನು ಪ್ರಬಂಧದಲ್ಲಿ ಕೊಡಲಾಗಿದೆ.

ಕೌಜಲಗಿಯಲ್ಲಿ ಇತ್ತೀಚಿನವರೆಗೂ ಹನುಮಂತ ದೇವರ ಜಾತ್ರೆಯಲ್ಲಿ ಓಕುಳಿ ಆಚರಣೆ ನಡೆಯುತ್ತವೆ. ಓಕುಳಿ ನೀರನ್ನು ಉಗ್ಗುವ ಪದ್ಧತಿ ಕಡಿಮೆಯಾಗಿದೆ. ಓಕುಳಿ ನೀರನ್ನು ಉಗ್ಗುವುದು ಹಾಗೂ ಉಗ್ಗಿಸಿಕೊಳ್ಳುವುದು ತಪ್ಪು ಎನ್ನುವ ತಿಳುವಳಿಕೆ ಜನರಲ್ಲಿ ಮೂಡಿದೆ. ಆದರೂ ಸಹ ಕೆಲವರು ಕಣ್‌ತಪ್ಪಿಸಿ ಮರೆಯಲ್ಲಿ ಉಗ್ಗಿಸಿಕೊಳ್ಳುವ ಪದ್ಧತಿ ಕಂಡುಬರುತ್ತದೆ. ಇನ್ನು ದೇವದಾಸಿ ಪದ್ಧತಿ ತೆರೆಯ ಮರೆಯಲ್ಲೂ ಜೀವಂತವಾಗಿರುವುದು ಕಂಡುಬರುತ್ತದೆ.

ನಿಂಗಮ್ಮಳ ಕಾಲದಿಂದ ಇಲ್ಲಿಯವರೆಗೆ ಶ್ರೀಕೃಷ್ಣ ಪಾರಿಜಾತ ನಾಟಕವು ಹನುಮಂತನ ಓಕುಳಿಯ ದಿನ ಅಭಿನಯಿಸಲ್ಪಡುವುದು ಪರಂಪರಾಗತವಾಗಿ ಕೌಜಲಗಿಯಲ್ಲಿ ಬೆಳೆದು ಬಂದಿದೆ. ಈ ಸಮುದಾಯದ ಕಲಾವಿದೆಯರ ಆರ್ಥಿಕ ಜೀವನ ತುಂಬಾ ಹೀನಾಯವಾಗಿದೆ. ಈ ಸಮುದಾಯದ ಕಲಾವಿದರ ಜೀವನದೃಷ್ಟಿಯನ್ನು ದಾಖಲಿಸಲು ಹಲವು ಕಡೆ ಕ್ಷೇತ್ರಕಾರ್ಯ ಮಾಡಲಾಗಿದೆ. ಈ ಸಮಯದಲ್ಲಿ ಡೊಂಬರು ಸಮುದಾಯದ ರಂಗನಟಿಯರಾದ ಶ್ರೀಮತಿ ಸಣ್ಣತಿಪ್ಪಮ್ಮ, ಚಂದ್ರವ್ವ ಕೌಜಲಗಿ, ಶ್ರೀಮತಿ ಲಕ್ಷ್ಮಮ್ಮ, ಗೌರಮ್ಮ ಹಾಗೂ ಕಮಲವ್ವ ಕೌಜಲಗಿ ಅವರನ್ನು ಸುದೀರ್ಘವಾಗಿ ಸಂದರ್ಶನ ಮಾಡಲಾಗಿದೆ.

ನಿಂಗಮ್ಮಳು ರಂಗಭೂಮಿಯ ಮೊದಲ ರಂಗನಟಿಯಾಗಿದ್ದಾಳೆ. ಸು. ೬೦ ೬೫ ವರ್ಷಗಳ ದೀರ್ಘ ಅವಧಿಯವರೆಗೆ ಕಲಾಸೇವೆ ಮಾಡಿದ್ದಾಳೆ. ಸರಕಾರ, ಸಮಾಜ, ಅಕಾಡೆಮಿಗಳಾಗಲಿ ಇವಳನ್ನು ಸಾರ್ಥಕವಾಗಿ

ನೆನಪಿಸಿಕೊಳ್ಳುವ ಯಾವ ಯೋಜನೆಗಳನ್ನು ಹಾಕಿಕೊಂಡಿಲ್ಲ. ಅವಳನ್ನು ಗುರುತಿಸುವ ಪ್ರಯತ್ನವನ್ನು ಸಹ ಮಾಡಿಲ್ಲ. ನಿಂಗಮ್ಮಳ ಸಾಧನೆಯನ್ನು ಕೆಲವು ವಿದ್ವಾಂಸರು ಗುರುತಿಸಿದ್ದಾರೆ. ಅವಳು ಕಲಾವಿದರಿಗೆ ಹಾಗೂ ಇಡೀ ಸ್ತ್ರೀ ಕುಲಕ್ಕೆ ಮಾದರಿಯಾಗಿದ್ದಾಳೆ. ರಂಗಭೂಮಿಯ ಹಿರಿಯ ಕಲಾವಿದೆಯಾದ ನಿಂಗಮ್ಮನ ಹೆಸರಲ್ಲಿ ಸರಕಾರ ರಂಗ ಕಲಾವಿದೆಯರಿಗೆ ಧನ ಸಹಾಯಮಾಡಬೇಕಾಗಿದೆ ಮತ್ತು ಅವರ ಹೆಸರಿನಲ್ಲಿ ಪ್ರಶಸ್ತಿಯನ್ನು ಕೊಡುವ ಯೋಜನೆಗಳನ್ನು ಸರಕಾರ ಹಮ್ಮಿಕೊಳ್ಳಬೇಕಾಗಿದೆ.

■■

# ಗ್ರಂಥ ಋಣ


೧. ಅಶೋಕ ನರೋಡೆ, ಕಲಾತಪಸ್ವಿ ಕೌಜಲಗಿ ನಿಂಗಮ್ಮ, ಕವಿ ಚಕ್ರವರ್ತಿ, ರನ್ನ ಪ್ರಕಾಶನ, ಮಹಾಲಿಂಗಪುರ, ೨೦೦೦

೨. ಅರ್ಜುನ ಗೋಳಸಂಗಿ, ದಲಿತರ ಬದುಕು ಮತ್ತು ಸಂಸ್ಕೃತಿ, ವಿಮೋಚನಾ ಪ್ರಕಾಶನ, ವಿಮೋಚನಾ ದೇವದಾಸಿ ಪುನರ್ವಸತಿ ಸಂಘ, ೨೦೦೦

೩. ಕಲಬುರ್ಗಿ ಎಂ.ಎಂ., ಜಾನಪದ ಸಾಹಿತ್ಯ ದರ್ಶನ ಭಾಗ ೧೧, ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿ.ವಿ. ಧಾರವಾಡ, ೧೯೮೭

೪. ಕುಲಕರ್ಣಿ ಅರಕೇರಿ ಆರ್.ಜಿ, ಅಪರಾಳ ತಮ್ಮಣ್ಣ ಕೃತಿ ಶ್ರೀ ಕೃಷ್ಣ ಪಾರಿಜಾತ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. ೧೯೭೨

೫. ಗುರಿಜಾಳ, ಬೆಳಗಾವಿ ಬೆಳಕು, ಕನ್ನಡ ಸಾಹಿತ್ಯ ಪರಿಷತ್ತು, ಪಂಪ ಮಹಾರವಿ ರಸ್ತೆ, ಬೆಂಗಳೂರು ೫೬೦ ೦೧೮, ೨೦೦೩

೬. ಗುಡಿಹಳ್ಳಿ ನಾಗರಾಜ, ಮರಿಯಮ್ಮನ ಹಳ್ಳಿ ರಂಗ ಸಿರಿ, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ, ೧೯೯೯

೭. ಚಂದ್ರಶೇಖರ ಕಂಬಾರ, ಬಯಲಾಟಗಳು, ಪ್ರಸಾರಾಂಗ ಬೆಂಗಳೂರು ವಿ.ವಿ. ಬೆಂಗಳೂರು, ೧೯೭೨

೮. ಜೋಗನ ಶಂಕರ, ದೇವದಾಸಿ ಸಂಪ್ರದಾಯ, ವಿಮೋಚನಾ ಪ್ರಕಾಶನ, ವಿಮೋಚನಾ ದೇವದಾಸಿ ಪುನರ್ವಸತಿ ಸಂಘ ಅಥವಾ ೫೯೧೩೦೪, ೧೯೯೩

೯. ದೇವೇಂದ್ರಕುಮಾರ್ ಸಿ. ಹಕಾರಿ, ಡೊಂಬರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೧೦. ಬಸವರಾಜ ಮಲಶೆಟ್ಟಿ, ಉತ್ತರ ಕರ್ನಾಟಕದ ಬಯಲಾಟಗಳು, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ, ೧೯೮೩

೧೧. ಬಾಳೇಶ ಲಕ್ಷಟ್ಟಿ, ಕಲಾಜ್ಯೋತಿ ದಿ. ಕೌಜಲಗಿ ನಿಂಗಮ್ಮ ಶ್ರೀಕೃಷ್ಣ ಪಾರಿಜಾತ, ಶ್ರೀ ಬಸವಣೆಪ್ಪ ಕೇಂದಾರೆವು ಬಡಿಗೇರ ಹುಲಕಟ್ಟಿ, ತಾ. ಗೋಕಾಕ್, ಜಿ. ಬೆಳಗಾವಿ, ೧೯೭೭

೧೨. ಮಹೇಶ್ವರಯ್ಯ ಎಚ್.ಎಮ್., ಡಾ.ಎ. ಮುರಿಗೆಪ್ಪ, ಡೊಂಬರ ಮದುಲ್ಸಿ ಪದಗಳು, ಸಹಿತಾ ಪ್ರಕಾಶನ, ಧಾರವಾಡ, ೧೯೮೧

೧೩. ಲಕ್ಕಪ್ಪಗೌಡ ಎಚ್.ಜೆ., ರಾಮಚಂದ್ರೇಗೌಡ, ಹಿ.ಶಿ. ಕೃಷ್ಣಮೂರ್ತಿ ಹನೂರು, ಸುವರ್ಣ ಜಾನಪದ ಸಂಪುಟ ೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು ೧೯೯೮

೧೪. ಲಕ್ಷ್ಮಣ ಆರ್., ರಾಮಕೃಷ್ಣಯ್ಯ ಬಿ.ಎಂ., ಶ್ರೀನಿವಾಸ ಮೂರ್ತಿ, ಪಿ.ಜಿ. ಶ್ರೀಕೃಷ್ಣ, ಸೀತಾರಾಂ ಸಿ. ಡೊಟ್ಟ ಹಲ್ಲೂರು, ರುಕ್ಕೋಜರಾವ್, ಸುಬ್ರಹ್ಮಣ ಬಾ.ನಾ. ಗಂಗಾಧರ ಮೊದಲಿಯರ್, ಕನ್ನಡ ಚಲನಚಿತ್ರ ಇತಿಹಾಸ ಭಾಗ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೧೫. ವೀರಣ್ಣ ದಂಡೆ, ಕನ್ನಡ ಜಾನಪದ ಪ್ರಜ್ಞೆ, ಕವಿಮಾರ್ಗ ಪ್ರಕಾಶನ, ತೇಜಸ್ವಿನಿ, ಸರಸ್ವತಿಪುರ ವಿ.ವಿ. ಅಂಚೆ ಕಲಬುರ್ಗಿ

೧೬. ಶ್ರೀರಾಮ ಇಟ್ಟಣ್ಣ, ಶ್ರೀಕೃಷ್ಣ ಪಾರಿಜಾತ ಒಂದು ಅಧ್ಯಯನ, ವಿನಿ ಪ್ರಕಾಶನ, ಬೀಳಗಿ, ೧೯೯೧

೧೭. ಶ್ರೀರಾಮ ಇಟ್ಟಣ್ಣ, ಕೌಜಲಗಿ ನಿಂಗಮ್ಮ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೭೨

೧೮. ಶೈಲಜಾ ಹಿರೇಮಠ, ಪಾತರದವರು, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ವಿದ್ಯಾರಣ್ಯ, ೧೯೯೯

೧೯. ಸುಬ್ಬಣ್ಣ ಕೆ.ವಿ., ರಂಗಭೂಮಿ ಮತ್ತು ಸಮುದಾಯ, ಶಿವರಾಮ ಕಾರಂತ ಅಧ್ಯಯನ ಕೇಂದ್ರ, ವಿವೇಕಾನಂದ ಕಾಲೇಜು, ಪುತ್ತೂರು ದಕ್ಷಿಣ ಕನ್ನಡ, ೨೦೦೦

೨೦. ಸುಂಕಾಪುರ ಎಂ.ಎಸ್., ಕುಲಗೋಡ ತಿಮ್ಮಣ್ಣ ಕೃತಿ ಶ್ರೀಕೃಷ್ಣ ಪಾರಿಜಾತ, ಕರ್ನಾಟಕ ವಿ.ವಿ. ಧಾರವಾಡ, ೧೯೭೨

೨೧. ಸುಂಕಾಪುರ ಎಂ.ಎಸ್., ಜಾನಪದ ಸಾಹಿತ್ಯ ದರ್ಶನ ಭಾಗ ೩ ಶ್ರೀಕೃಷ್ಣ ಪಾರಿಜಾತ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿ.ವಿ. ಧಾರವಾಡ, ೧೯೭೮

೨೨. ಹೊಸೂರು ಮುನಿರಾಮಪ್ಪ, ನಟವರ ಸಂಸ್ಕೃತ, ಕರ್ನಾಟಕ ಸಾಹಿತ್ಯ ಅಕಾಡೆಮಿ, ನೃಪತುಂಗ ರಸ್ತೆ, ಬೆಂಗಳೂರು, ೧೯೯೩

## ಲೇಖನಗಳು

೧. ಚಂದ್ರಶೇಖರ ಕಂಬಾರ, ಕೌಜಲಗಿ ನಿಂಗಮ್ಮ, ಕನ್ನಡ ಜಾನಪದ ವಿಶ್ವಕೋಶ ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು

೨. ಚಂದ್ರಶೇಖರ ಕಂಬಾರ, ಆಧುನಿಕ ನಾಟಕಕಾರ ಮತ್ತು ತರಬೇತಿ ಜಾನಪದ ರಂಗಭೂಮಿ, ಸುವರ್ಣ ಜಾನಪದ.

೩. ನಿಂಗಣ್ಣ ಸಣ್ಣಕ್ಕಿ, "ಕನ್ನಡದ ಸಣ್ಣಾಟಗಳು" ಕರ್ನಾಟಕ ಜಾನಪದ

೪. ಪ್ರಕಾಶ ಕೋಟನತೋಟ, ಕನ್ನಡ ಜಾನಪದ ಕಲಾರಂಗ ಭೂಮಿಯ ಮಹಾನ್ ಕಲಾತಪಸ್ವಿ ದಿ ಕೌಜಲಗಿ ನಿಂಗಮ್ಮನವರು

೫. ಪ್ರಕಾಶ ಕೋಟನತೋಟ, ಕನ್ನಡ ಕಲಾ ರಂಗಭೂಮಿಗೊಂದು ಚೇತನ ದಿ ಕೌಜಲಗಿ ನಿಂಗಮ್ಮ, ಕನ್ನಡಮ್ಮ ದಿನಪತ್ರಿಕೆ, ದಿ. ೨೭.೫.೧೯೮೫

೬. ಬಸವರಾಜ ಮಲಶೆಟ್ಟಿ, ಜಾನಪದ ರಂಗಭೂಮಿ ಮತ್ತು ಮಹಿಳೆ, ಜಾನಪದ ಜಗತ್ತು ವಿಶೇಷ ಸಂಯುಕ್ತ ಸಂಚಿಕೆ, ೧೯೯೧, ೧೯೯೨

೭. ಭಟ್ಟ ಜಿ.ಎಸ್., ಬಾಡುವ ಹಾದಿಯಲ್ಲಿ ಶ್ರೀಕೃಷ್ಣ ಪಾರಿಜಾತ ಜಾನಪದ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ನೃಪತುಂಗ ರಸ್ತೆ, ಬೆಂಗಳೂರು

■■

## ವಕ್ತೃಗಳ ವಿವರ

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ವಿಳಾಸ |
|---|---|---|---|---|
| ೦೧. | ಬಿ.ಎಂ. ಕೌಜಲಗಿ | ೮೩ | ನಿವೃತ್ತಿ ಶಿಕ್ಷಕರು | ಕೌಜಲಗಿ, ಗೋಕಾಕ ತಾ. ಬೆಳಗಾವಿ ಜಿ. |
| ೦೨. | ಸುಭಾಷ ಕೌಜಲಗಿ | ೪೫ | ತಾಲ್ಲೂಕು ಪಂಚಾಯಿತಿ ಅಧ್ಯಕ್ಷರು | ಕೌಜಲಗಿ, ಗೋಕಾಕ ತಾ. ಬೆಳಗಾವಿ ಜಿ. |
| ೦೩. | ರಾಮಪ್ಪ ಹನುಮಂತಪ್ಪ | ೮೬ | ಹನುಮಂತನಗುಡಿ | ಕೌಜಲಗಿ, ಗೋಕಾಕ ತಾ. ಬೆಳಗಾವಿ ಜಿ. |
| ೦೪. | ಯಮುನಪ್ಪ ಗೋಪಾಳಪ್ಪ | ೮೪ | ಒಕ್ಕಲುತನ | ಕೌಜಲಗಿ, ಗೋಕಾಕ ತಾ. ಬೆಳಗಾವಿ ಜಿ. |
| ೦೫. | ಪ್ರಕಾಶ ಕೋಟನತೋಟ | ೪೮ | ಪತ್ರಿಕೋದ್ಯಮ | ಕೌಜಲಗಿ, ಗೋಕಾಕ ತಾ. ಬೆಳಗಾವಿ ಜಿ. |
| ೦೬. | ಕಮಲಾಭಾಯಿ | ೪೮ | ರಂಗನಟಿ | ಮಹಾಲಿಂಗಾಪುರ, ಮುಧೋಳ ತಾ. ಬಾಗಲಕೋಟೆ ತಾ. |
| ೦೭. | ಮಹಾದೇವಪ್ಪ | ೨೫ | ರಂಗನಟ | ಮಹಾಲಿಂಗಾಪುರ, ಮುಧೋಳ ತಾ. ಬಾಗಲಕೋಟೆ ತಾ. |
| ೦೮. | ಮಹಾಲಿಂಗಯ್ಯ ಬಸವಪ್ಪಯ್ಯ ಇಟ್ಟಿನಮಠ | ೭೦ | ವ್ಯಾಪಾರಸ್ಥರು | ಮಹಾಲಿಂಗಾಪುರ, ಮುಧೋಳ ತಾ. ಬಾಗಲಕೋಟೆ ತಾ. |
| ೦೯. | ಪರಪ್ಪ ಗುರುಬಸಪ್ಪ ಅಂಗಡಿ | ೮೪ | ವ್ಯಾಪಾರಸ್ಥರು | ಮಹಾಲಿಂಗಾಪುರ, ಮುಧೋಳ ತಾ. ಬಾಗಲಕೋಟೆ ತಾ. |
| ೧೦. | ಬಾಳಪ್ಪ ಗುರುಬಸಪ್ಪ ಮುನ್ನಳಿ | ೮೭ | ಗಣ್ಯ ವ್ಯಾಪಾರಿಗಳು | ಮಹಾಲಿಂಗಾಪುರ, ಮುಧೋಳ ತಾ. ಬಾಗಲಕೋಟೆ ತಾ. |
| ೧೧. | ಮಲ್ಲಮ್ಮ | ೯೨ | ಒಕ್ಕಲಿಗರು | ಮಹಾಲಿಂಗಾಪುರ, ಮುಧೋಳ ತಾ. ಬಾಗಲಕೋಟೆ ತಾ. |
| ೧೨. | ಡಿ. ಅಡಿವಮ್ಮ | ೫೬ | ರಂಗನಟಿ | ಕೂಡ್ಲಿಗಿ, ಬಳ್ಳಾರಿ ಜಿ. |
| ೧೩. | ಡಿ. ಸರೋಜಮ್ಮ | ೪೫ | ಅಂಗನವಾಡಿ ಶಿಕ್ಷಕಿ | ಕೂಡ್ಲಿಗಿ, ಬಳ್ಳಾರಿ ಜಿ. |
| ೧೪. | ಡಿ. ಭರಮಣ್ಣ | ೫೦ | ಮೆಕಾನಿಕ್ | ಕೂಡ್ಲಿಗಿ, ಬಳ್ಳಾರಿ ಜಿ. |

ಕ್ಷೇತ್ರ ಕಾರ್ಯದ ಮಾಹಿತಿ ನೀಡಿ ಸಹಕರಿಸಿದ ಡಾ. ಅಶೋಕ್ ನರೋಡೆ, ಬಿ.ಎಂ. ಕೌಜಲಗಿ ಪ್ರೊ. ದೇವೇಂದ್ರ ಬಿಸ್ಸಾಗರ್, ಶ್ರೀರಾಮ್ ಇಟ್ಟಣ್ಣನವರ, ಡಾ. ಬಸವರಾಜ ಮಲಶೆಟ್ಟಿ, ಪ್ರಕಾಶ್ ಕೋಟಿನ್‌ತೋಟ್ಟ ಮತ್ತು ಕಮಲವ್ವ ಕೌಜಲಗಿ, ಇವರಿಗೆ ನನ್ನ ಕೃತಜ್ಞತೆಗಳು.

■■



೨. ದಿ. ಕೌಜಲಗಿ ನಿಂಗಮ್ಮ ಹುಟ್ಟಿದ ಮನೆ (ಕೌಜಲಗಿ)



೩. ದಿ. ಕೌಜಲಗಿ ನಿಂಗಮ್ಮ ಬಾಳಿದ ಮನೆ (ಮಹಾಲಿಂಗಾಪುರ)



೪. ದಿ. ಕೌಜಲಗಿ ನಿಂಗಮ್ಮನ ವಂಶಸ್ಥರು (ಮಹಾಲಿಂಗಾಪುರ)



೫. ದಿ. ಕೌಜಲಗಿ ನಿಂಗಮ್ಮನ ಬಂಧುಗಳು (ಕೌಜಲಗಿ)



೬. ಕೌಜಲಗಿ ಹನುಮಂತ ದೇವರ ದೇವಸ್ಥಾನ (ಕೌಜಲಗಿ)

೭. ಓಕುಳಿ ಹೊಂಡ (ಕೌಜಲಗಿ)





೮. ಹನುಮಂತ ದೇವರ ದೇವಸ್ಥಾನ (ಕೌಜಲಗಿ)

೯. ದಿ. ಕೌಜಲಗಿ ನಿಂಗಮ್ಮನ ರಂಗಮಂದಿರ (ಕೌಜಲಗಿ)





೧೦. ಕೌಜಲಗಿಯ ಹನುಮಂತ ದೇವರು




೧೧. ದಿ. ಕೌಜಲಗಿ ನಿಂಗಮ್ಮನ ರಂಗಮಂದಿರ (ಕೌಜಲಗಿ)



೧೨. ಮಹಾಲಿಂಗಪುರದಲ್ಲಿ ನಿಂಗಮ್ಮನ ಕುರಿತ ಸಂವಾದ



೧೩. ಕೌಜಲಗಿಯಲ್ಲಿ ನಿಂಗಮ್ಮನ ಕುರಿತ ಸಂವಾದ

